# ತೆರೆಮರೆಯ ಚಿತ್ರಗಳು

( ಏಕಾಂಕ ನಾಟಕ )



ಎಂ. ವಿ. ಸೀತಾರಾಮಯ್ಯ



ಶಿವಮೊಗ್ಗ

ಕಾವ್ಯಾಲಯ

೧೯೩೧.

# ತೆರೆಮರೆಯ ಚಿತ್ರಗಳು

( ಏಕಾಂಕ ನಾಟಕ )

ಎಂ. ವಿ. ಸೀತಾರಾಮಯ್ಯ, ಎಂ. ಎ.

ಕಾವ್ಯಾಲಯ
ಪ್ರಕಾಶಕರು
ಶಿವಮೊಗ

# ಮುನ್ನುಡಿ

ಈ ನಾಟಕವನ್ನು ಹಸ್ತಪ್ರತಿಯ ರೂಪದಲ್ಲಿ ಓದಿದ, ಕೇಳಿದ, ಮಿತ್ರರು ಒಬ್ಬಿಬ್ಬರು – ನಾಟಕದ ಮುಖ್ಯಪಾತ್ರಗಳ ವರ್ತನೆ ಅಸ್ವಾಭಾವಿಕ, ಮೇಲುಪಂಕ್ತಿ ಹಾಕುವಂತಿಲ್ಲ – ಎಂಬುದಾಗಿ ಆಕ್ಷೇಪಣೆ ಮಾಡಿದರು. ನಾಟಕವನ್ನು ಪ್ರಕಟನೆಗೆ ಕೊಡುವ ಮುನ್ನ ಆಕ್ಷೇಪಣೆಯನ್ನು ಕುರಿತು ದೀರ್ಘವಾಗಿ ಯೋಚನೆ ಮಾಡಿದೆ; ಯೋಚನೆ ಮಾಡಿದ ಮೇಲೂ, ಪಾತ್ರಗಳ ನಡವಳಿಕೆ 'ನನ್ನ ದೃಷ್ಟಿ'ಯಲ್ಲಿ ಆಕ್ಷೇಪಣೀಯವಾಗಿ ಕಾಣಬರಲಿಲ್ಲ. ವಾಚಕರಲ್ಲಿ ಯಾರಿಗಾದರೂ ಕೆಲವರಿಗೆ ಆ ಬಗೆಯ ಆಕ್ಷೇಪಣೆ ತೋರಬಹುದೆಂದು ಶಂಕಿಸಿ, ಪಾತ್ರಗಳ ಹಾಗೂ ನಾಟಕದ ಉದ್ದೇಶದ ಬಗ್ಗೆ 'ನನ್ನ ದೃಷ್ಟಿ'ಯನ್ನು ಸಂಕ್ಷೇಪವಾಗಿ ವಾಚಕರ ಮುಂದೆ ಇಡಲು 'ಹಿನ್ನುಡಿ'ಯಲ್ಲಿ ಪ್ರಯತ್ನಪಟ್ಟಿರುತ್ತೇನೆ. ನಾಟಕವನ್ನು ಓದಿದ ಬಳಿಕ 'ಹಿನ್ನುಡಿ'ಯನ್ನು ಓದಬೇಕೆಂದು ನನ್ನ ಆಶಯ.

ಶ್ರೀಮಾನ್ ಕೆ. ಚಿದಂಬರಂ ಅವರು ಮುಂದೆ ಬಂದು ಈ ನಾಟಕವನ್ನು ನನ್ನಿಂದ ತೆಗೆದುಕೊಂಡು, ತಮ್ಮ 'ವಿಚಾರ ವಾಹಿನಿ'ಯಲ್ಲೂ ಪುಸ್ತಕರೂಪದಲ್ಲೂ ಪ್ರಕಟಿಸಿ ನನಗೆ ಉಪಕಾರ ಮಾಡಿದ್ದಾರೆ. ಅವರ ಈ ಉಪಕಾರವನ್ನು ಇಲ್ಲಿ ನೆನೆಯಲು ನನಗೆ ಬಹು ಸಂತೋಷ.

೧—೪—೧೯೪೧
ಬೆಂಗಳೂರು

ಎಂ. ವಿ ಸೀತಾರಾಮಯ್ಯ.

---

## ತಿದ್ದುಪಡಿ.

ಪಾತ್ರ ವಿವರದಲ್ಲಿ, "ಸುಶೀಲೆ—ಗೋವಿಂದರಾಯನ ಮಡದಿ" ಎಂಬುದನ್ನು "ಸುಶೀಲೆ—ಗೋವಿಂದರಾಯನ ಬೆಲೆವೆಣ್ಣು" ಎಂದು ತಿದ್ದಿಕೊಳ್ಳಬೇಕು.

---

# ತೆರೆಮರೆಯ ಚಿತ್ರಗಳು

( ಏಕಾಂಕ ನಾಟಕ )

---

## ಪಾತ್ರಗಳು

ರಮೇಶ: ಚಿತ್ರಗಾರ.

ಶಿವಶಂಕರ: ರಮೇಶನ ಶಿಷ್ಯ.

ಗೋಪಾಲ: ಶಿವಶಂಕರನ ಗೆಳೆಯ.

ಗೋವಿಂದರಾಜು: ಒಬ್ಬ ಸಿರಿವಂತ; ಚಿತ್ರಕಲಾಭಿಮಾನಿ.

ಸುಶೀಲೆ: ಗೋವಿಂದರಾಜುನ ~~ಮಗಳು~~. ಚೆಲುವೆ

---

[ ರಮೇಶ ಒಬ್ಬ ಚಿತ್ರಗಾರ. ಅವನ ಚಿತ್ರಶಾಲೆ — ಎಂದರೆ ಅವನ ಚಿತ್ರಗಳನ್ನು ಬರೆಯಲು ಮಾತ್ರ ಉಪಯೋಗಿಸುವ ಕೋಣೆ — ಎದುರಿನಲ್ಲಿ. ಬಲಭಾಗದಲ್ಲಿ ಒಂದು ದೊಡ್ಡ ಕಿಟಕಿ. ಅದಕ್ಕೆ ಗಾಜಿನ ಬಾಗಿಲುಗಳಿವೆ. ಕಿಟಕಿಗೆ ತೆರೆ ಹಾಕಿದೆ, ಅದು ಅರ್ಧ ಒಂದು ಪಕ್ಕಕ್ಕೆ ಸರಿದಿದೆ. ಕಿಟಕಿಯಿಂದ ಹೊರಗೆ — ಸಣ್ಣ ಬಯಲು, ಅಲ್ಲೊಂದು ಇಲ್ಲೊಂದು ಗಿಡಮರ, ಒಂದು ತೋಟದ ಬೇಲಿ — ಇಷ್ಟು ಕಾಣುತ್ತವೆ.

ಕೋಣೆಯ ಎಡಗಡೆಗೆ — ಒಳಕೋಣೆಗೆ ಹೋಗುವ ಬಾಗಿಲು. ಬಲಗಡೆಗೆ — ಮನೆಯ ಮುಂಭಾಗದಿಂದ (ನಡುವೆಯಿಂದ) ಬರುವ ಬಾಗಿಲು.

ಎದುರು ಗೋಡೆಯ ಮೇಲೆ ಮೂರು ದೊಡ್ಡ ಚಿತ್ರಪಟಗಳನ್ನು ಹಾಕಿದೆ. ಅವಕ್ಕೆ ಕರಿಯ ಬಟ್ಟೆಯ ತೆರೆ ಹಾಕಿರುವುದರಿಂದ ಅವು ಯಾವುವು ಎಂಬುದು ಗೊತ್ತಾಗುವಂತಿಲ್ಲ. ಉಳಿದ ಕಡೆ, ಅಲ್ಲೊಂದು, ಇಲ್ಲೊಂದು ಬಿಟ್ಟು ೧೦—೧೨ ವರ್ಣಚಿತ್ರಗಳನ್ನು ಹಾಕಿದೆ.

ಎದುರು ಕಿಟಕಿಯ ಬಳಿ ಚಿತ್ರ ಬರೆಯುವ ಸಿಲುವು ( Easel ) ಇದೆ. ಸಿಲುವಿನ ಮುಮ್ಮಗ್ಗಲು ಒಳಗೆ ಕೋಣೆಯ ಕಡೆಗೆ ( ರಂಗಸ್ಥಳದ ಬಲಕ್ಕೆ ) ತಿರುಗಿದೆ. ಅದರ ಮೇಲೆ—ಬರೆಯುವುದರಲ್ಲಿರುವ ಚಿತ್ರವೊಂದಿದೆ. ಅದರ ಮೇಲೆ ಬಿಳಿಯ ತೆಳು ಬಟ್ಟೆಯನ್ನು ಮುಚ್ಚಿದೆ. ಸಿಲುವಿನ ಪಕ್ಕದಲ್ಲಿ ಎತ್ತರವಾದ ಕಾಲುಮಣೆಯ ಮೇಲೆ ಬಣ್ಣದ ಪೆಟ್ಟಿಗೆ, ಕುಂಚಗಳು ಮೊದಲಾದವು ಇವೆ.

ಕೋಣೆಯಲ್ಲಿ ಒಂದೆರಡು ಕುರ್ಚಿಗಳು ಮಾತ್ರ ಇವೆ ಕೆಳಗೆ ಚಾಪೆ ಹಾಸಿದೆ. ಒಟ್ಟಿನಲ್ಲಿ, ಕೋಣೆ ಚಿತ್ರಗಾರನ ರಸಿಕತೆಗೆ ತಕ್ಕಂತೆ ಅಷ್ಟೇನೂ ಅಚ್ಚುಕಟ್ಟಾಗಿಲ್ಲ. ಗೋಡೆಗೆ ಸುಣ್ಣ ಬಳಿದು ಬಹುಕಾಲವಾಗಿದೆ.

ತೆರೆ ಸರಿದಾಗ—ಅಥವಾ—ಎದ್ದಾಗ— ಶಿವಶಂಕರ (ರಮೇಶನ ಶಿಷ್ಯ: ೧೮–೨೦ ವರ್ಷಗಳ ಯುವಕ) ಕುಂಚಗಳನ್ನು ತೊಳೆಯುತ್ತಿರುತ್ತಾನೆ. ಹೊರಗಿನಿಂದ ಬಾಗಿಲು ತಟ್ಟಿದ ಸದ್ದಾಗುತ್ತದೆ ಶಿವಶಂಕರ ಹೋಗಿ ಬಾಗಿಲನ್ನು ತೆರೆದು ಬರುತ್ತಾನೆ. ಅವನ ಜೊತೆಯಲ್ಲಿ ಇನ್ನೊಬ್ಬ ಯುವಕ ಬರುತ್ತಾನೆ. ಶಿವಶಂಕರ ಮತ್ತೆ ಕುಂಚಗಳನ್ನು ತೊಳೆಯುವುದರಲ್ಲಿ ಮಗ್ನನಾಗಿರುತ್ತಾನೆ. ಬಂದ ಯುವಕ ಹಾಗೆಯೇ ಒಂದೊಂದಾಗಿ ಚಿತ್ರಗಳನ್ನು ನೋಡಿಕೊಂಡು ಬರುತ್ತಿರುತ್ತಾನೆ ]

ಶಿವಶಂಕರ:—ಗೋಪು, ಬಾ ಕೂತುಕೊ.

ಗೋಪಾಲ:—(ಚಿತ್ರಗಳನ್ನು ನೋಡುತ್ತಿದ್ದು, ಹಿಂದಿರುಗದೆ) ನಾನು ಕೂತು ಕೊಳ್ಳುವುದಕ್ಕೆ ಬರಲಿಲ್ಲ.

ಶಿವಶಂಕರ:—ಹೌದು. ನನಗೂ ಗೊತ್ತಿದೆ. ನಿನ್ನೆ ಯಾಕೆ ಬರಲಿಲ್ಲ? ಬಾ ಅಂತ ಹೇಳಿದ್ದೆನಲ್ಲ?

ಗೋಪಾಲ:—ನಿನ್ನೆ ಮಧ್ಯಾಹ್ನ ಏನೊ ಬೇರೆ ಕೆಲಸ ಇತ್ತು: ಇಲ್ಲಿ ಹೆಚ್ಚು ಹೊತ್ತು ಇರುವುದಕ್ಕೆ ಆಗುತ್ತಿರಲಿಲ್ಲ ಅಂತ ಇವೊತ್ತು ಬೇಗ ಊಟಮಾಡಿಕೊಂಡು ಬಂದೆ. ರಮೇಶರು ಬರುವ ಹೊತ್ತೋ ಹೇಗೆ? ನನ್ನಿಂದ ನೀನು ಬೈಗುಳನ್ನು ತಿನ್ನ ಬಾರದಪ್ಪ!

ಶಿವಶಂಕರ:—ಪರವಾ ಇಲ್ಲ ಗೋಪು. ನನ್ನ ಸ್ನೇಹಿತ ಒಬ್ಬ ನಿಮ್ಮ ಚಿತ್ರಗಳನ್ನು ಬಹುದಿನಗಳಿಂದ ನೋಡಬೇಕು ಅಂತ ಇದ್ದಾನೆ. ಕರಕೊಂಡು ಬರಲೆ ಅಂತ ನಾನೇ ಅವರನ್ನ ಬೆಳಗ್ಗೆ ಕೇಳಿದ್ದೆ. ತಾವು ಕೆಲಸಮಾಡುತಿರುವ ಹೊತ್ತಿನಲ್ಲಿ ಮಾತ್ರ ಬೇಡ ಎಂದು ಹೇಳಿದ್ದರು. ಅವರು ಕೆಲಸಮಾಡುವ ಹೊತ್ತಿನಲ್ಲಿ ಯಾರೂ ಇರಕೂಡದು. ಒಬ್ಬರೇ ಕೆಲಸಮಾಡುವುದೇ ಅವರಿಗೆ ಅಭ್ಯಾಸ.

ಗೋಪು:—ನೀನೂ ಇರಕೂಡದೇ?

ಶಿವ:—ನಾನು ಇರದೆ ಚಿತ್ರಕಲೆ ಕಲಿಯುವುದು ಹೇಗೆ?

ಗೋಪು:—ಅವರು ಬರೆಯುವಾಗ ನೀನು ಇದ್ದ ಮಾತ್ರಕ್ಕೆ ನಿನಗೆ ಏನು ಬಂದ ಹಾಗಾಯಿತು?

ಶಿವ:—ನೀನು ಮ್ಯಾಥಿಮ್ಯಾಟಿಕ್ಸ್ ಸ್ಟೂಡೆಂಟು, ತಿಳಿಯಿತೆ? ಹೋಂ ವರ್ಕ್ ಕೊಟ್ಟು ಮನೆಯಲ್ಲಿ ಮಾಡಿಕೊಂಡು ಬಾ ಅನ್ನುವ ಹಾಗಲ್ಲ ಚಿತ್ರಕಲೆ. ಬತ್ತದ ಮರ ಎಷ್ಟು ಅಡಿ ಅಂತ ಕೇಳಿದ ಹಾಗಾಯಿತು ನಿನ್ನ ಪ್ರಶ್ನೆ.

ಗೋಪು:—ನೀನು ಮ್ಯಾಥಿಮ್ಯಾಟಿಕ್ಸ್ ಸ್ಟೂಡೆಂಟ್ ಅಲ್ಲ ಅನ್ನೋದು ಇದರಿಂದಲೇ ಗೊತ್ತಾಗುತ್ತೆ. ಲೆಕ್ಕ ಹೀಗೆ ಅಂತ ತೋರಿಸದೆ ಎಲ್ಲ ಹೋಂ ವರ್ಕ್ ಕೊಟ್ಟುಬಿಟ್ಟರೆ ನಮ್ಮಂಥವರೆಲ್ಲ ಹೋಂ ನಲ್ಲೇ ಇರುವುದೇ! ಮ್ಯಾಥಿಮ್ಯಾಟಿಕ್ಸ್‌ಗೆ ಜೀನಿಯಸ್ ಬೇಕಿಲ್ಲ; ಸ್ಟಡಿ ಅಪ್ಲಿಕೇಷನ್ ಬೇಕು ಅಷ್ಟೆ. ನೀನು ಲೆಕ್ಕದ ಪೀರಿಯಡ್ಡಿನಲ್ಲಿ ಡೆಸ್ಕಿನ ಮೇಲೆ ಪ್ರೊಫೆಸರ್ ಚಿತ್ರವನ್ನೂ — ಆ ಮೇಲೆ ಆ ಮೂಲೆಯಲ್ಲಿ ಕುಳಿತುಕೊಳ್ಳುತ್ತಿತ್ತಲ್ಲ — ಆ ಹೆಣ್ಣುವ್ಯಕ್ತಿ, ಅದರ ಚಿತ್ರವನ್ನೂ ಬರೆದು ಬರೆದೇ ಲೆಕ್ಕದಲ್ಲಿ ಫೇಲಾಗುತ್ತಿದ್ದದ್ದು. ಅದಿರಲಿ, ಆ ಇಂದಿರೆಯ ಚಿತ್ರವನ್ನು ಏನು ಮಾಡಿದೆ? ನಿಮ್ಮ ಡ್ರಾಯಿಂಗ್ ಮೇಷ್ಟ್ರಿಗೆ ತೋರಿಸಿದೆಯಾ?

ಶಿವ:—ಡ್ರಾಯಿಂಗ್ ಮೇಷ್ಟರಲ್ಲ—ಗುರುಗಳು ಅನ್ನು.

ಗೋಪು:—ಹಾಗೆಯೇ ಆಗಲಿ, ನಿನ್ನ ಗುರುಗಳಿಗೆ ತೋರಿಸಿದೆಯ?

ಶಿವ:—ಅದನ್ನು ತೋರಿಸಿದ್ದರಿಂದಲೇ ಅವರು ನನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸಿದ್ದು.

ಗೋಪು:—ಹಾಗಾದರೆ, ಅವರು ತುಂಬ ರಸಿಕರಿರಬೇಕು. ಅನೇಕ ಹುಡುಗಿಯರ ಚಿತ್ರಗಳನ್ನು ಬರೆದಿರಬೇಕು. ಅಲ್ಲವೇ ಶಿವು? (ವ್ಯಂಗ್ಯವಾಗಿ ನಗುವನು.)

ಶಿವ:—ನೋಡು, ಗೋಪು! ಒಬ್ಬರ ವಿಚಾರ ತಿಳಿಯದೆ ಹೀಗೆ ಮಾತ ನಾಡಬಾರದು. ಅವರ ಚಿತ್ರಗಳನ್ನು ನೋಡಿದ ಮೇಲೆ ಮಾತ

ನಾಡುವಿಯಂತೆ. ಬಾ ಇಲ್ಲಿ, ನೋಡು ಅವರ ಚಿತ್ರಗಳನ್ನು! ಎಷ್ಟು ಸೊಗಸಾಗಿವೆ! ಆ 'ಟ್ವೈಲೈಟ್ ಪಿಕ್ಚರ್' ನೋಡು, ಸಂಜೆಗೆಂಪು ಎಷ್ಟು ಸ್ವಾಭಾವಿಕವಾಗಿದೆ, ಅದೆಷ್ಟು ಮನೋಹರವಾಗಿದೆ! ಇಂಥ Landscapes ಇನ್ನೂ ಬೇಕಾದಷ್ಟು ಬರೆದಿದ್ದಾರೆ.

ಗೋಪು:—Landscape ಅಂದರೆ?

ಶಿವ:—ಭೂಮಿಯ ಮೇಲಿನ ಪ್ರಕೃತಿದೃಶ್ಯಗಳ ಚಿತ್ರ! ಪ್ರಕೃತಿ ಚಿತ್ರಗಳನ್ನು ಬರೆಯುವುದೆಂದರೆ ಅವರಿಗೆ ಬಹು ಆನಂದ. ನಮ್ಮ ಗುರುಗಳು ಪ್ರಕೃತಿ ಚಿತ್ರಗಳನ್ನು ತಮ್ಮ ಕೋಣೆಯಲ್ಲೇ ಕೂತು ಬರೆಯುತ್ತಾರೆ.

ಗೋಪು:—ಉಳಿದವರು ಹಾಗಾದರೆ ಹೊರಗೆ ಬರೆಯುತ್ತಾರೇನು?

ಶಿವ:—ಹೌದು. ಸಾಧಾರಣವಾಗಿ ಚಿತ್ರಗಾರರೆಲ್ಲ ತಮ್ಮ ಬಣ್ಣ ಕುಂಚಗಳನ್ನು ಜೊತೆಯಲ್ಲಿ ತೆಗೆದುಕೊಂಡು ಹೊರಗೆ ಹೋಗಿ, ಎದುರಿಗೆ ಕಂಡ ದೃಶ್ಯಗಳನ್ನು ಕಂಡಂತೆ ಚಿತ್ರಿಸುತ್ತಾರೆ. ನಮ್ಮ ಗುರುಗಳು ತಮಗೆ ಸುಂದರವಾಗಿ ಕಂಡ ದೃಶ್ಯವನ್ನು ತಮ್ಮ ಮನ ತಣಿಯುವ ವರೆಗೂ ನೋಡುತ್ತಾರೆ. ಇಲ್ಲಿ ಬಂದು ಅದನ್ನು ತಮ್ಮ ನೆನಪಿನಿಂದ ಮಾತ್ರ, ಎಂದರೆ ತಮ್ಮ ಅನುಭವವನ್ನು ಮಾತ್ರ ಚಿತ್ರಿಸುತ್ತಾರೆ. ಇದರಿಂದ, ಚಿತ್ರದ Naturalness— ಸ್ವಾಭಾವಿಕತೆ ಕಡಮೆಯಾಗಬಹುದು, ಆದರೆ ಅದರ ಸೊಬಗು ಹೆಚ್ಚುತ್ತದೆ ಎಂದು ಅವರು ಹೇಳುತ್ತಾರೆ. ನನಗೂ ಹಾಗೆಯೇ ತೋರುತ್ತದೆ.

ಗೋಪು:—ಅವರ ಶಿಷ್ಯ ನೀನು, ಸರಿ. ಅದಿರಲಿ, ರಮೇಶರಿಗೆ ಇದರಿಂದ ಜೀವನವಾಗುತ್ತದೆಯೆ? (ಎಂಬು ದೂರದಿಂದಲೇ ಚಿತ್ರಗಳನ್ನು ನೋಡುತ್ತಿರುತ್ತಾನೆ.)

ಶಿವ:—ಅದೇ ತೊಂದರೆ, ಪಾಪ. ಅವರ ಹೆಸರೇ ಜನಕ್ಕೆ ಹೆಚ್ಚಾಗಿ ತಿಳಿಯದು. ಚಿತ್ರಗಳನ್ನು ಕೊಂಡುಕೊಳ್ಳುವುದು ಹಾಗಿರಲಿ,

ನೋಡುವುದಕ್ಕೂ ಜನ ಬರುವುದಿಲ್ಲ. ನಮ್ಮ ಜನಕ್ಕೆ ನಿಜವಾದ ಚಿತ್ರಕಲೆಯಲ್ಲಿ ಅಭಿರುಚಿ ಇಲ್ಲ ಎಂದು ನನಗೆ ತೋರುತ್ತದೆ. ಉದಾಹರಣೆಗೆ, ನೀನೇ ಇದ್ದೀಯೆ. ಎಷ್ಟು ದಿವಸ ಹೇಳಿದ ಮೇಲೆ ನೀನು ಇಲ್ಲಿಗೆ ಬಂದಿರುವುದು?

ಗೋಪು:—ಶಿವೂ, ನನ್ನದೊಂದು ಸಲಹೆ ಇದೆ. ಅವರು ಜೊತೆಗೆ ಫೋಟೋಗ್ರಫಿಯನ್ನೂ ಇಟ್ಟುಕೊಂಡರೆ ಅದರಿಂದ ಜೀವನ ಮಾಡಬಹುದು.

ಶಿವ:—ಅವರಿಗೆ ಅದು ಗೊತ್ತಿಲ್ಲದೆ ಇಲ್ಲ. ಆದರೆ ಅವರ ಮನಸ್ಸಿಗೆ ಅದು ಒಪ್ಪುವುದಿಲ್ಲ. ಫೋಟೋಗ್ರಫಿಯ ಮೇಲೆ ಅವರಿಗೆ ಬಹು ರೋಷ. ಚಿತ್ರಕಲೆಗೆ ಅದರಿಂದ ದೊಡ್ಡ ಧಕ್ಕೆ ಉಂಟಾಗಿದೆ. ಪೂರ್ವದಲ್ಲಿ ಫೋಟೋಗ್ರಫಿ ಬರುವುದಕ್ಕಿಂತ ಮುಂಚೆ ಶ್ರೀಮಂತರು, ಧನಿಕರು, ಎಲ್ಲರೂ ಭಾವಚಿತ್ರಗಳನ್ನು ಬರಸಿಕೊಳ್ಳುತ್ತಿದ್ದರು. ಫೋಟೋ ಚಿತ್ರಗಳು ಬಂದ ಮೇಲೆ ಭಾವಚಿತ್ರಕಲೆ ಮೂಲೆಗೆ ಬಿದ್ದ ಹಾಗೆಯೇ. ಪ್ರಕೃತಿ ಚಿತ್ರಗಳನ್ನು ಮೋಹಿಸಿಕೊಳ್ಳುವವರಿಲ್ಲ; ಭಾವಚಿತ್ರಗಳನ್ನು ಹಣ ಕೊಟ್ಟು ಬರಸಿಕೊಳ್ಳುವ ರಸಿಕರಿಲ್ಲ. ರಾಮ, ಕೃಷ್ಣ, ಲಕ್ಷ್ಮಿ, ಸರಸ್ವತಿ ಮುಂತಾದ ಕಾಣದ ದೇವರ ಚಿತ್ರಗಳನ್ನು ಬರೆದು ಮಾರಿ ಹೊಟ್ಟೆ ಹೊರೆಯಲು ನಮ್ಮ ರಮೇಶನಿಗೆ ಇಷ್ಟವಿಲ್ಲ.

ಗೋಪು:—ರಮೇಶರಿಗೆ ಭಾವಚಿತ್ರಗಳನ್ನೂ ಬರೆಯುವುದಕ್ಕೆ ಬರುತ್ತದೆಯೋ?

ಶಿವ:—ಚಿತ್ರಗಾರನೆಂದ ಮೇಲೆ ಎಲ್ಲ ಬಗೆಯ ಚಿತ್ರಗಳನ್ನೂ ಬರೆಯುವುದಕ್ಕೆ ಬಂದಿರಬೇಕು.

ಗೋಪು:—ಅದು ಸರಿ. ನಿಮ್ಮ ರಮೇಶರಿಗೆ ಚೆನ್ನಾಗಿ ಭಾವಚಿತ್ರಗಳನ್ನು ಬರೆಯುವುದಕ್ಕೆ ಬರುತ್ತದೆಯೋ?

ಶಿವ:—ಬರುತ್ತದೆ, ಅದ್ಭುತವಾಗಿ ಬರೆಯಬಲ್ಲರು. ನನಗೆ ತಿಳಿದಿರುವ ಮಟ್ಟಿಗೆ ಅವರು ಕೆಲವು ಭಾವಚಿತ್ರಗಳನ್ನು ಮಾತ್ರ ಬರೆದಿದ್ದಾರೆ.

ಬರೆದಿರುವವೆಲ್ಲವೂ ಬರಸಿಕೊಂಡವರ ಬಳಿ ಇವೆ. ಅವರ ಬಳಿ ಇರುವವು ಮೂರು ಮಾತ್ರ.

ಗೋಪು:—ಹಾಗಾದರೆ ನಾನು ಅವನ್ನು ನೋಡಬಹುದೇ? ಅವರ ಪ್ರಕೃತಿ ಚಿತ್ರಗಳು ನನ್ನ ಮನಸ್ಸಿಗೆ ಅಷ್ಟು ಒಪ್ಪಲಿಲ್ಲ. ಇವು ಯಾವುವು? (ತೆರೆ ಹಾಕಿದ ಮೂರು ಚಿತ್ರಗಳ ಕೆಳಗೆ ಹೋಗಿ ನಿಂತು ತೋರಿಸಿ ಕೇಳುತ್ತಾನೆ.)

ಶಿವ:—ಅವು ಹಾಗಿರಲಿ. ಅವರ ಪ್ರಕೃತಿ ಚಿತ್ರ ನಿನ್ನ ಮನಸ್ಸಿಗೆ ಹಿಡಿಯದಿದ್ದ ಮೇಲೆ ಅವರ ಭಾವಚಿತ್ರಗಳೂ ನಿನ್ನ ಮನಸ್ಸಿಗೆ ಹಿಡಿಯುವುದಿಲ್ಲ.

ಗೋಪು:—ಯಾಕೆ?

ಶಿವ:—ಪ್ರಕೃತಿ ಚಿತ್ರಗಳಂತೆಯೇ ಭಾವಚಿತ್ರಗಳನ್ನೂ ಸಹ ಅವರು ಹೆಚ್ಚಾಗಿ ನೆನಪಿನಿಂದಲೇ ಬರೆಯುತ್ತಾರೆ. ತಾವು ಕಂಡ ಮುಖವನ್ನು ಮಾತ್ರ ಅವರು ಚಿತ್ರಿಸುವುದಿಲ್ಲ; ಆ ಮುಖದಲ್ಲಿ ತಾವು ಗ್ರಹಿಸಿದ ಭಾವವನ್ನು ಬಿಂಬಿಸಲು ಹೆಚ್ಚು ಹೊತ್ತು ಕಳೆಯುತ್ತಾರೆ.

ಗೋಪು:—ಓಹೋ! ಹಾಗೋ! ಹಾಗಾದರೆ ಅವರು ಬರೆದ ಭಾವಚಿತ್ರಗಳು ಎಲ್ಲಿವೆ, ಸ್ವಲ್ಪ ತೋರಿಸು, ನೋಡಿಯೇ ಬಿಡೋಣ.

ಶಿವ:—ನೋಡು – ಅವೇ ಆ ಮೂರು ಚಿತ್ರಗಳು; ಕರಿಯ ತೆರೆಯ ಮರೆಯಲ್ಲಿವೆ. ನಾನು ಚಿತ್ರಕಲೆ ಕಲಿಯುವುದಕ್ಕೆ ಬಂದಂದಿನಿಂದ ಇಂದಿನ ವರೆಗೆ ತೆರೆ ತೆಗೆದಿಲ್ಲ. ಆದರೆ—

ಗೋಪು:—ಆದರೆ, ಒಂದಲ್ಲ ಒಂದುದಿನ ಬೆಳಕು ಕಾಣಬೇಕು. ಇವೊತ್ತು ನಾನು ಅವುಗಳ ತೆರೆ ಕದಲಿಸುತ್ತೇನೆ.

ಶಿವ:—ಕೂಡದು ಗೋಪು. ನಾನೇ ಅವನ್ನು ನೋಡಿಲ್ಲ.

ಗೋಪು:—ನೀನೇ ನೋಡಿಲ್ಲವೇ?

ಶಿವ:—ಇಲ್ಲ. ಅವು ಯಾರವೆಂಬುದನ್ನೂ ಕೂಡ ಅರಿಯೆ.

ಗೋಪು:—ಹಾಗಾದರೆ ಆ ಚಿತ್ರಗಳ ವಿಷಯದಲ್ಲಿ ಏನೋ Mystery (ರಹಸ್ಯ) ಇದೆ. ಅವನ್ನು ನೋಡಲು ನನಗೆ ಬಹಳ ಕುತೂಹಲ ವಾಗುತ್ತಿದೆ.

ಶಿವ:—ನನಗೂ ಕುತೂಹಲ. ಆದರೆ—ನಮ್ಮ ಗುರುಗಳ ಆಜ್ಞೆಯನ್ನು ನಾನು ಮೀರಲಾರೆ; ಎಂದೂ ಮೀರಿಲ್ಲ.

ಗೋಪು:—ಈ ದಿನ – ನನಗಾಗಿ –

ಶಿವ:—ನಿನಗಾಗಿಯೂ ಸಾಧ್ಯವಿಲ್ಲ.

ಗೋಪು:—ಹೋಗಲಿ-ಅವು ಯಾರವೆಂದೂ ನಿನಗೆ ಅವರು ಹೇಳಿಲ್ಲವೇ?

ಶಿವ:—ಹಾಗೆ ಕೇಳುವ ಧೈರ್ಯವೂ ಇಲ್ಲ.

ಗೋಪು:—ಯಾರವಿರಬಹುದೆಂದು ನಿನಗೆ ತೋರುತ್ತದೆ?

ಶಿವ:—ನನಗೆ ಗೊತ್ತಿಲ್ಲ. ನಾನು ಊಹಿಸಲಾರೆ.

ಗೋಪು:—ಚಿತ್ರಗಾರನಾಗತಕ್ಕವನಿಗೆ ಇಷ್ಟು ಊಹಾಜ್ಞಾನವಿಲ್ಲವೇ? ಇರಲಿ, ನಾನು ಆಗಲೇ ಊಹಿಸಿದ್ದೇನೆ.

ಶಿವ:—ನಿನ್ನ ಊಹೆ ಅದೇನಾಗಲಿ. ಗುರುಗಳು ಬರುವ ಹೊತ್ತಾಯಿತು.

ಗೋಪು:— ಗಾಡಿ ಬಿಡು ಅಂತ ನನಗೆ ಸೂಚನೆ ಕೊಡುತ್ತೀಯ? ನನ್ನನ್ನು ಇಲ್ಲಿ ಕಂಡರೆ ನಿನ್ನನ್ನು ಬೈಯುತ್ತಾರೇನು? ನಾನು ಮೊದಲೇ ಹೇಳಲಿಲ್ಲವೇ? ನನ್ನಿಂದ ನೀನು ಬೈಗುಳ ತಿನ್ನಬೇಡ ಅಂತ.

ಶಿವ:—ಇಲ್ಲ, ಪರವಾ ಇಲ್ಲ. ಇವೊತ್ತು ನಿನ್ನ ಕರೆದುಕೊಂಡು ಬರುತ್ತೇನೆಂದು ಹೇಳಿದ್ದೆ. ನಾನು ಇರುವ ವರೆಗೂ ಇರ ಬಹುದು. ಅವರು ಬಂದ ಕೂಡಲೆ ನಾನು ಊಟಕ್ಕೆ ಹೋಗುತ್ತೇನೆ.

ಗೋಪು:—ಹಾಗಾದರೆ ಅಲ್ಲಿಯ ವರೆಗೆ ಇರಬಹುದಲ್ಲ. (ಮರೆಸುವಂತೆ) ಅಲ್ಲ – ಇಷ್ಟು ಊಹಿಸಲಾರದೆ ಹೋದೆಯಾ?

ಶಿವ:—ನಿನ್ನ ಊಹಾಶಕ್ತಿ ನನಗೆಲ್ಲಿ ಬರಬೇಕು?

ಗೋಪು:—ರಮೇಶರ ತಾಯಿತಂದೆ ಇದ್ದಾರೋ?

ಶಿವ:—ಇಲ್ಲ. ಬಾಲ್ಯದಲ್ಲಿಯೇ ಹೋದರೆಂದು ಕೇಳಿದೆ.

ಗೋಪು:—ಹಾಗಾದರೆ ನನ್ನ ಊಹೆ ಅರ್ಧ ಸರಿ. ಕೊನೆಯ ಚಿತ್ರಗಳು ಎರಡು ಅವರ ತಾಯಿತಂದೆಗಳವು.

ಶಿವ:—ಇರಬಹುದು. ಆದರೆ ನಿನ್ನ ಊಹಾಶಕ್ತಿ ಕೊಂಚ ಐಬು.

ಗೋಪು:—ಹೇಗೆ?

ಶಿವ:—ತಂದೆತಾಯಿಗಳ ಚಿತ್ರಗಳಾದರೆ – ತೆರೆ ಹಾಕಿ ಮುಚ್ಚುವುದರಲ್ಲಿ ಅರ್ಥವೇನು?

ಗೋಪು:—ಹಾಗೆನ್ನುತ್ತೀಯೇನು? ಹಾಗಾದರೆ – ಇಲ್ಲ, ಖಂಡಿತವಾಗಿಯೂ ತಾಯಿತಂದೆಗಳ ಚಿತ್ರವೇ? ದಿನವೂ ನೋಡುತ್ತಿದ್ದರೆ ದುಃಖದ ಜ್ಞಾಪಕ ಬರುತ್ತದೆಂದು ತೆರೆ ಹಾಕಿರಬಹುದು.

ಶಿವ:—ಇರಬಹುದು. ನಡುವೆ ಇರುವ ಚಿತ್ರ?

ಗೋಪು:—ಅವರ ಹೆಂಡತಿಯುದಿರಬಹುದು.

ಶಿವ:—ಆದರೆ – ಅವರಿಗೆ ಮದುವೆಯೇ ಆಗಿಲ್ಲವಲ್ಲ!

ಗೋಪು:—ನಿನಗೆ ಗೊತ್ತೋ?

ಶಿವ:—ನನ್ನ ಮದುವೆಯ ಪ್ರಸ್ತಾಪ ಬಂದಾಗ ಅವರೇ ಒಂದು ದಿನ ಹೇಳಿದ್ದರು, ತಮಗೆ ಇನ್ನೂ ಮದುವೆಯಾಗಿಲ್ಲ ಅಂತ. ಅವರು ಮದುವೆಯನ್ನೇ ಮಾಡಿಕೊಳ್ಳುವ ಹಾಗೆ ಕಾಣಲಿಲ್ಲ.

ಗೋಪು:—ಹಾಗಾದರೆ — ಅವರ 'Lady love' (ಪ್ರೇಯಸಿ) ಆಕೆಯ ಚಿತ್ರ ಇರಬಹುದು.

**ಶಿವ:**—ನೋಡೂ – ಅವರ ವಿಷಯ ನನಗಿಂತಲೂ ನಿನಗೆ ಗೊತ್ತೆ? ಅವರ ಮಾತುಕತೆಯಲ್ಲಿ – ನಡತೆಯಲ್ಲಿ – ಅವರು ಯಾರನ್ನೂ ಆ ರೀತಿ ಕಂಡುಕೊಂಡಿರುವ ಹಾಗೆ ತೋರಬಂದಿಲ್ಲ. ಒಂದು ವೇಳೆ ಹಾಗಿದ್ದರೂ, ಅಂಥವಳ ಚಿತ್ರವನ್ನು ತಾಯಿತಂದೆಗಳ ಚಿತ್ರಗಳ ಮಧ್ಯೆ ಹಾಕುವುದರಲ್ಲಿ ಅರ್ಥವೇನು ?

ಗೋಪು:—ಹಾಗೆ ಹಾಕಿದ್ದರೆ ಅದರಲ್ಲಿ ಆಶ್ಚರ್ಯವೇನು ? ಅದು ಸಹಜ ವಾಗಿಯೇ ಇದೆ. ತನ್ನ 'ಪ್ರೇಯಸಿ' ತಂದೆತಾಯಿಗಳಿಗಿಂತಲೂ ಹೆಚ್ಚು ಅಂತ ಅದರ ಅರ್ಥ

ಶಿವ:—ನಿನ್ನ ತಾಯಿತಂದೆಗಳ ವಿಷಯದಲ್ಲಿ ನೀನು ಹಾಗೆಯೇ ನಡೆದು ಕೊಳ್ಳುವ ಹಾಗೆ ಕಾಣುತ್ತೆ.

ಗೋಪು:—ಹಾಗೆ ನಡೆದುಕೊಂಡರೆ ತಾನೆ ತಪ್ಪೇನು ? ಉದುರುವ ಹಣ್ಣೆಲೆಯ ಮೇಲೆ ತಾನೆ ಚಿಗುರು ಒಡೆದು ನಲಿಯುವುದು ? ನನ್ನ ಊಹೆ ಸುಳ್ಳಾಗಲಿ — ನನಗೇನೂ ನಷ್ಟವಿಲ್ಲ. ಅದು ಹೋಗಲಿ, ಈ ಚಿತ್ರ ಯಾರ ಭಾವಚಿತ್ರ? ಅದನ್ನೂ ನೋಡ ಕೂಡದೋ ?

**ಶಿವ:**—ಕೂಡದು.

ಗೋಪು:—ಅರೆಗೆಲಸವೆಂದೋ ?

ಶಿವ:—ಹೌದು. ಆದರೆ ಮುಗಿಯುತ್ತ ಬಂದಿದೆ. ಈವೊತ್ತು ಇನ್ನೂ ಅರ್ಧಘಂಟೆಯ ಕಾಲ ಅದರ ಮೇಲೆ ಕೈಯಾಡಿಸಿದರೆ ಅದೂ ಮುಗಿದ ಹಾಗೇ ಸರಿ.

**ಗೋಪು:**—ಹಾಗಾದರೆ ನೀನು ಇದನ್ನು ನೋಡಿದ್ದೀಯಲ್ಲವೇ ?

**ಶಿವ:**—ಅವರು ಕೆಲಸ ಮಾಡುವಾಗ ನೋಡುತ್ತಿದ್ದೆ.

ಗೋಪು:—ಹಾಗಾದರೆ ಚಿತ್ರ ಯಾರದ್ದು ?

ಶಿವ:—ಒಬ್ಬ ತರುಣಿಯದು.

**ಗೋಪು:**—ತರುಣಿಯದೇ ! ಎಲ್ಲ ಚಿತ್ರಗಳ ಹಾಗೆ ನೆನಪಿನಿಂದಲೇ **ಬರೆಯುತ್ತಾರೆಯೋ, ಅಥವಾ —**

ಶಿವ:—ಬಹುಭಾಗವನ್ನು ನೆನಪಿನಿಂದ ಬರೆದಿದ್ದಾರೆ. ಈ ಚಿತ್ರವನ್ನು ಸುಮಾರು ಒಂದು ತಿಂಗಳಿಂದ ಬರೆಯುತ್ತಿದ್ದಾರೆ. ಆ ಹೆಂಗಸು ಪ್ರತಿದಿನವೂ ಇಲ್ಲಿಗೆ ಮಧ್ಯಾಹ್ನವಾದ ಮೇಲೆ ಬಂದು ೨ – ೩ ಗಂಟೆಗಳ ಹೊತ್ತು ಇರುತ್ತಾಳೆ. ಆಗ ಆಕೆಯನ್ನು ನೋಡಿ ಕೊಂಡು ತಿದ್ದಬೇಕಾದ ಭಾಗಗಳನ್ನು ತಿದ್ದಿಕೊಳ್ಳುತ್ತಾರೆ, ಅಷ್ಟೆ. ಗುರುತು ಹಾಕಿಕೊಂಡ ಭಾಗಗಳಿಗೆ ನೆನಪಿನಿಂದಲೇ ಜೀವಕಳೆ ಕೊಡುತ್ತಾರೆ.

ಗೋಪು:—ಆಕೆ ಯಾರು?

ಶಿವ:—ನನಗೆ ಗೊತ್ತಿಲ್ಲ.

ಗೋಪು:—ಆಕೆಯನ್ನು ನೀನು ನೋಡಿಲ್ಲವೇ ?

ಶಿವ:—ನೋಡಿದ್ದೇನೆ, ನೋಡಿಲ್ಲದೆ ಏನು? ದಿನವೂ ನೋಡುತ್ತಿದ್ದೇನೆ.

ಗೋಪು:—ಹಾಗಾದರೆ ನಿಮ್ಮ ಗುರುಗಳು ಆಕೆಯನ್ನು ಕೂರಿಸಿ ಕೊಂಡು ಚಿತ್ರ ಬರೆಯುವಾಗ ನೀನೂ ಎದುರಿನಲ್ಲಿ ಇರುತ್ತೀಯ?

ಶಿವ:—ಇಲ್ಲ, ಇರುವುದಿಲ್ಲ.

ಗೋಪು:—ಏನು! ನೀನೂ ಇರುವುದಿಲ್ಲವೇ? ಹಾಗಾದರೆ; ರಮೇಶ, ಆಕೆ —

ಶಿವ:—ಮತ್ತು ಆಕೆಯ ಗಂಡ!

ಗೋಪು:—ಓ, ಹಾಗೆನ್ನು ಮತ್ತೆ. ನೀನೆಲ್ಲಿರುತ್ತಿ – ಇರುವುದಿಲ್ಲ ಅಂದೆಯಲ್ಲ?

ಶಿವ:—ಆಕೆಯನ್ನು ಕೂರಿಸಿಕೊಂಡು ಚಿತ್ರ ಬರೆಯುವಾಗ ನಾನು ಇರಕೂಡದು ಅಂತ ಹೇಳಿದ್ದಾರೆ. ನಾನು, ಅಗೋ, ಆ ಕೊಠಡಿಯಲ್ಲಿ ಕೂತು ಚಿತ್ರಾಭ್ಯಾಸ ಮಾಡುತ್ತಿರುತ್ತೇನೆ. ಅವರು ಕೂಗಿದಾಗ ಎದ್ದು ಬಂದು ಬಣ್ಣಗಿಣ್ಣ ತೆಗೆದು ಕೊಡು ತ್ತೇನೆ. ಒಂದೊಂದು ದಿನ ನಾನೇ ಕೇಳಿಕೊಂಡು ಮನೆಯಲ್ಲೇ ಇದ್ದುಬಿಡುತ್ತೇನೆ. ಈ ಭಾವಚಿತ್ರವಂತೂ ಬಹಳ ಚೆನ್ನಾಗಿ ಬಂದಿದೆ ಗೋಪು.

ಗೋಪು:—ಹಾಗೇನು! ಆಕೆ ಬಹು ಚೆನ್ನಾಗಿರಬೇಕು ಹಾಗಾದರೆ.

ಶಿವ:—ಬಹು ಚೆನ್ನಾಗಿದ್ದಾರೆ. ಆಕೆ ಎಷ್ಟು ಚೆನ್ನಾಗಿದ್ದಾರೆ ಅಂತ ಮಾತುಗಳಿಂದ ಹೇಳಲಾರೆ. ಒಂದು ಚಿತ್ರವನ್ನೇ ಬರೆದು ನಿನಗೆ ತೋರಿಸಬೇಕು. ಅಷ್ಟು ಚೆನ್ನಾಗಿದ್ದಾರೆ.

ಗೋಪು:—ಅಷ್ಟು ಚೆನ್ನಾಗಿರುವಳೇನು? ಇನ್ನೂ ಎಷ್ಟು ಹೊತ್ತಾಗುತ್ತೆ ಅವರು ಬರೋದು?

ಶಿವ:—ಇನ್ನೂ ಅರ್ಧಗಂಟೆಯಾದರೂ ಆಗಬಹುದು, ಒಂದು ಗಂಟೆಯಾದರೂ ಆಗಬಹುದು.

ಗೋಪು:—ರಮೇಶರು ಬರುವುದು?

ಶಿವ:—ಹೋಟಲಿಗೆ ಊಟಕ್ಕೆ ಹೋಗಿದ್ದಾರೆ. ಇನ್ನೇನು ಬರುವ ಹೊತ್ತು.

ಗೋಪು:—ಹೋಟಲಿಗೆ! ಮನೆಯಲ್ಲಿ—

ಶಿವ:—ಮನೆಯಲ್ಲಿ ಯಾರು ಮಾಡುವವರು?

ಗೋಪು:—ಹಾಗಾದರೆ ಈ ಮನೆಗೆಲ್ಲಾ ಅವರೊಬ್ಬರೇ ಏನು?

ಶಿವ:—ಹೌದು. ಅವರೊಬ್ಬರೇ. ಒಂದು ಸಲ ನಾನೇ ಕೇಳಿದೆ: ಮದುವೆ ಮಾಡಿಕೊಂಡು ಅಡಿಗೆಮಾಡಿ ಹಾಕುತ್ತೇನೆ—ಎಷ್ಟು ಹೊತ್ತು ಬೇಕಾದರೂ ಮನೆಯಲ್ಲಿಯೇ ಜೊತೆಯಾಗಿ ಇರುತ್ತೇನೆ ಅಂತ. ತಾವು ಬರೆದ ಚಿತ್ರಗಳೇ ತಮ್ಮ ಒಡನಾಡಿಗಳೆಂದು ಅವರು ಹೇಳುತ್ತಾರೆ. ಒಂದು ದಿವಸ ನಾನು ಇದ್ದಕ್ಕಿದ್ದ ಹಾಗೆಯೇ ಒಳಗೆ ಬಂದೆ; ತೆರೆ ಹಾಕಿದೆ ನೋಡು—ಆ ಚಿತ್ರಗಳೊಡನೆ ಅವರು ಮಾತಾಡುತ್ತಿದ್ದರು. ನನ್ನನ್ನು ಕಂಡಕೂಡಲೇ ಮುತ್ತೆ ತೆರೆ ಹಾಕಿದರು. ನನಗೆ ಆಶ್ಚರ್ಯವಾಯಿತು. ಅವೊತ್ತೇ ಅವರು ನನಗೆ ಖಂಡಿತವಾಗಿ ಹೇಳಿದ್ದು—ಆ ಚಿತ್ರಗಳನ್ನು ನಾನು ಎಂದೂ ನೋಡಕೂಡದೆಂದು.

ಗೋಪು:—ನಾನು ಮೊದಲೇ ಹೇಳಲಿಲ್ಲವೇ—ಆ ಚಿತ್ರಗಳಲ್ಲಿ ಏನೋ Mystery (ರಹಸ್ಯ) ಇದೆ. ಹೋಗಲಿ, ಗುರುಗಳ ಮಾತನ್ನು

ನೀನು ಯಾಕೆ ವಿಚಾರಬೇಕು; ನಾನು ಆ ಚಿತ್ರಗಳನ್ನು ನೋಡುವ ಲಭ್ಯವಿದ್ದರೆ ಎಂದಾದರೂ ನೋಡಿಯೇ ನೋಡುತ್ತೇನೆ. ಆ ಕೊಠಡಿಯಲ್ಲಿರುವ ಉಳಿದ ಚಿತ್ರಗಳನ್ನಾದರೂ ತೋರಿಸುತ್ತೀಯೋ ಇಲ್ಲವೋ ?

ಶಿವ:—ಅದಕ್ಕೇನು — ಅಗತ್ಯವಾಗಿ ಆಗಬಹುದು, ಬಾ. ( ಗೋಪುವನ್ನು ಎಡಕೋಣೆಗೆ ಕರೆದುಕೊಂಡು ಹೋಗುತ್ತಾನೆ. ಕೂಡಲೆ, ಹೊರಗಿನಿಂದ ರಮೇಶರು ಮೆಲುದನಿಯಲ್ಲಿ 'ಶಿವಶಂಕರ್, ಶಿವಶಂಕರ್' ಎಂದು ಕೂಗಿದ ಸದ್ದಾಗುತ್ತದೆ. ಶಿವಶಂಕರನಿಗೆ ಮೊದಲು ಕೇಳಿಸುವುದಿಲ್ಲ. ಇನ್ನೊಮ್ಮೆ ಗಟ್ಟಿಯಾಗಿ 'ಶಿವಶಂಕರ್' ಎಂದು ಕೂಗುತ್ತಾರೆ. ಶಿವಶಂಕರ ಎಡಕೋಣೆಯಿಂದ ಧಾವಿಸಿ ಬಂದು [ಬಲಗಡೆ ಹೋಗಿ] ಹೊರಬಾಗಿಲನ್ನು ತೆಗೆದು ಬರುತ್ತಾನೆ ಜೊತೆಯಲ್ಲಿ ರಮೇಶರೂ ಪ್ರವೇಶಿಸುತ್ತಾರೆ. ಅಷ್ಟು ಹೊತ್ತಿಗೆ ಗೋಪಾಲನೂ ಬಂದು ನಿಂತಿರುತ್ತಾನೆ.

( ರಮೇಶ— ಎತ್ತರದ ಆಳು, ಆದರೆ ಅಷ್ಟು ಪುಷ್ಟವಲ್ಲದ ಶರೀರ, ಕೃಶವಾದ ಶರೀರ ಎಂದೇ ಹೇಳಬಹುದು; ಮುಖದ ಮಾಟ ಅಷ್ಟು ಚೆಲುವಾಗಿಲ್ಲದಿದ್ದರೂ ಅದೊಂದು ಬಗೆಯ ಅನಿರ್ವಚನೀಯವಾದ ಚೆಲುವಾದ ಭಾವ ಮುಖದಲ್ಲಿ ನೆಲಸಿರುವಂತೆ ಕಾಣುತ್ತದೆ. ಜೋಲುಗುರುಳಿನ 'ಕ್ರಾಪು'. ನೋಡಿದರೆ ೨೫—೩೦ ವರ್ಷ ವಯಸ್ಸಿನಂತೆ ಕಾಣುತ್ತದೆ. ಉಡುಪು ತೆಳುವಾದ ಬಟ್ಟೆಯ ಇಳಿಜುಬ್ಬ, ಕಚ್ಚೆಯ ಪಂಚೆ, ಉತ್ತರೀಯ.)

ರಮೇಶ:—(ಈಸಿ ಚೇರ್ ಮೇಲೆ ಕುಳಿತು) ಇದು ಯಾರು ? ನಿನ್ನ ಸ್ನೇಹಿತ—

ಶಿವ:—ಗೋಪಾಲರಾವ್. ಇವೊತ್ತು ಬರುತ್ತಾನೆ ಅಂತ ಬೆಳಗ್ಗೆ ಹೇಳಿದ್ದೆನಲ್ಲ—ಬಂದ. ಕಾಲು ಗಂಟೆ ಆಯಿತು.

ರಮೇಶ:—ಹಾಗಾದರೆ ಇನ್ನೂ ಚಿತ್ರಗಳನ್ನು ನೋಡಿಲ್ಲ ಅಂತ ಕಾಣುತ್ತೆ.

ಶಿವ:—ಹೌದು, ಇನ್ನೂ ನೋಡಿಲ್ಲ. ಈಗತಾನೇ ಕೊಟಡಿಗೆ ಕರೆದುಕೊಂಡು ಹೋಗಿ ತೋರಿಸುತ್ತಿದ್ದೆ. ಅದಕ್ಕೇ ನೀವು ಕೂಗಿದ್ದು ಕೇಳಿಸಲಿಲ್ಲ ಮೊದಲು.

ರಮೇಶ:—ಸರಿ ಬಿಡು, ಅದೇನು ಮಹಾ ಪ್ರಮಾದ. ಸುಮ್ಮನೆ ಕೇಳಿದೆ ಏನು ಮಾಡುತ್ತಿದ್ದೆ ಅಂತ. ಕೂತುಕೊಳ್ಳಿ ಗೋಪಾಲ

ರಾವ್. (ಗೋಪಾಲ ನಿಂತೇ ಇರುವನು) ಶಿವಶಂಕರ್ ಬೆಳಗ್ಗೆ ಹೇಳಿದ–ಇವೊತ್ತು ಮಧ್ಯಾಹ್ನ ನೀವು ಬರುತ್ತೀರಿ ಅಂತ. ಇನ್ನು ಕಾಲು ಗಂಟೆ ಸ್ವಲ್ಪ ವಿಶ್ರಮಿಸಿಕೊಂಡು ಕೆಲಸಕ್ಕೆ ಪ್ರಾರಂಭಿಸಬೇಕಾಗಿದೆ. ದಯವಿಟ್ಟು ಏನೂ ತಿಳಿದುಕೊಳ್ಳಬೇಡಿ. ನಾಳೆಯೋ ಅಥವಾ ನಾಡಿದ್ದೋ ಬಿಡುವಾಗಿ ಬಂದು ಚಿತ್ರಗಳನ್ನು ನೋಡಿ.

ಗೋಪು:—ಹಾಗೆಯೇ ಆಗಬಹುದು. ತಾವು ಈಗ ಬರೆಯುತ್ತಿರುವ ಚಿತ್ರ ಇವೊತ್ತು ಮುಗಿಯುತ್ತದಂತೆ. ಅದನ್ನೂ ನೋಡಬಹುದಷ್ಟೇ?

ರಮೇಶ:—ಸಾಧ್ಯವಿಲ್ಲ ಅಂತ ತೋರುತ್ತೆ. ಏಕೆಂದರೆ, ನೋಡಿ ಗೋಪಾಲರಾವ್, ಈ ಚಿತ್ರವನ್ನು ನಾನು ಇನ್ನೊಬ್ಬರಿಗಾಗಿ ಬರೆಯುತ್ತಿರುವುದು. ನಿನ್ನೆಯೇ ಕೇಳಿದರು — ಮುಗಿಯಿತೇ ಅಂತ. ಇವೊತ್ತು ಅವರು ಚಿತ್ರವನ್ನು ತೆಗೆದುಕೊಂಡು ಹೋಗಿಬಿಡುತ್ತಾರೆ.

ಗೋಪು:—ಹಾಗಾದರೆ ಯತ್ನವಿಲ್ಲ. ನಾನು ಬರುತ್ತೇನೆ ಸಾರ್, ನಮಸ್ಕಾರ. ಶಿವಶಂಕರ್, ಬರುತ್ತೇನಯ್ಯ, ನಾಳೆ ಬಂದರೂ ಬರುತ್ತೇನೆ. (ಹೋಗುವನು. ಶಿವಶಂಕರ ಅವನ ಹಿಂದೆ ಹೋಗಿ ಮತ್ತೆ ಬರುವನು.)

ರಮೇಶ:—ಶಿವಶಂಕರ್!

ಶಿವ:—ಏನು ಸಾರ್?

ರಮೇಶ:—ಕೂತುಕೊ.

ಶಿವ:—(ನಿಂತೇ ಇರುವನು.)

ರಮೇಶ:—ಕೂತುಕೋ ಶಿವಶಂಕರ್. (ಮುಖವನ್ನು ಕೈಗಳಿಂದ ಮುಚ್ಚಿಕೊಳ್ಳುವನು.)

ಶಿವ:—ಮೈಗೆ ಸರಿಯಾಗಿಲ್ಲವೇ ಸಾರ್?

ರಮೇಶ:—ಮೈಗೆ ಸರಿಯಾಗಿದೆ; ಮನಸ್ಸು ಸರಿಯಾಗಿಲ್ಲ. (ಕ್ಷಣಹೊತ್ತು ಸುಮ್ಮನಿದ್ದು) ನೀನು ಊಟಕ್ಕೆ ಹೊರಡು.

ಶಿವ:—ಹಾಗಾದರೆ ಹೊರಡುತ್ತೇನೆ. ಮಧ್ಯಾಹ್ನದ ಮೇಲೆ ಅವರು ಬರುತ್ತಾರೆ, ಅಲ್ಲವೇ ಸಾರ್? ನಾನು—

ರಮೇಶ:—ಬೇಡ – ನೀನು ಬರಬೇಡ ಇವೊತ್ತು.

ಶಿವ:—ಹಾಗೆಯೇ ಆಗಲಿ ಸಾರ್. (ಹೊರಡುವನು.)

ರಮೇಶ:—ಶಿವಶಂಕರ —

ಶಿವ:—(ತಿರುಗಿ ಬಂದು) ಏನು ಸಾರ್?

ರಮೇಶ:—ಹೊಟ್ಟೆ ಹಸಿಯುತ್ತಿದೆಯೇನು?

ಶಿವ:—ಇಲ್ಲ.

ರಮೇಶ:—ಸುಳ್ಳು ಹೇಳುತ್ತಿ.

ಶಿವ:—ಹೌದು.

ರಮೇಶ:—ಮನೆಗೆ ಹೋಗಬೇಡ. ಆದರೆ—

ಶಿವ:—ಆಗಲಿ ಸಾರ್, ಇಲ್ಲಿಯೇ ಇರುತ್ತೇನೆ.

ರಮೇಶ:—ಇಲ್ಲ, ಮನೆಗೆ ಹೋಗಿ ಬಾ.

ಶಿವ:—ಸಂಕೋಚ ಯಾಕೆ ಸಾರ್, ನಾನು ಈಗ ಇಲ್ಲಿಯೇ ಬೇಕಾದರೆ ಇರುತ್ತೇನೆ.

ರಮೇಶ:—ನಿನ್ನ ತಾಯಿ ನಿನಗಾಗಿ ಕಾದಿರುವುದಿಲ್ಲವೇ? ಹೋಗಿ ಬಿಟ್ಟು ಬೇಗ ಬಾ.

ಶಿವ:—ಕಾದಿರುವುದಿಲ್ಲ ಸಾರ್. ಇಲ್ಲಿಗೆ ಬಂದರೆ ಒಂದೊಂದು ದಿನ ನಾನು ತಡವಾಗಿ ಹೋಗುವುದು ಅವರಿಗೆ ಗೊತ್ತು.

ರಮೇಶ:—ಹಾಗಾದರೆ ಹಿಡಿ (ಜೇಬಿನಿಂದ ದುಡ್ಡು ತೆಗೆದು ಕೊಟ್ಟು) ಸರ್ರನೆ ಹೋಗಿ ಹೋಟಲಿನಲ್ಲಿ ಊಟಮಾಡಿಕೊಂಡು ಬಾ. ೧೫ ನಿಮಿಷದಲ್ಲಿ ಬರಬೇಕು. ಗೊತ್ತಾಯಿತೆ?

ಶಿವ: — ಆಗಲಿ. ಆದರೆ – ದುಡ್ಡು – ಬೇಡ ( ಹಿಂದಿರುಗಿಕೊಡಹೋಗುವನು. ತೆಗೆದುಕೊಳ್ಳದಿರಲು) ನನ್ನ ಹತ್ತಿರ ಇದೆ ಸಾರ್, ತೆಗೆದುಕೊಳ್ಳಿ.

ರಮೇಶ: — ಪರವಾಯಿಲ್ಲ, ಹೋಗು; ಆ ಮೇಲೆ ಕೊಡುವಿಯಂತೆ. ಬೇಗ ಬಾ, ಅಷ್ಟೆ.

ಶಿವ: — ಆಗಲಿ ಸಾರ್. ಅವರು ಬರುವಷ್ಟರಲ್ಲಿ ಹಿಂದಿರುಗಿ ಬರುತ್ತೇನೆ. ( ಹೋಗುವನು. )

[ ರಮೇಶನು ಮೇಲಕ್ಕೆದ್ದು ಚಿತ್ರದ ಬಳಿಗೆ ಬಂದು, ಅದರ ಮುಸುಗುದೆರೆ ತೆರೆಯುವನು ಕುಂಚವನ್ನು ತೆಗೆದುಕೊಂಡು, ಬಣ್ಣ ಅದ್ದಿಕೊಂಡು, ಚಿತ್ರವನ್ನು ಬರೆಯಲು ತೊಡಗುವನು. ಬರೆಯುತ್ತ ಬರೆಯುತ್ತ ಮಾತನಾಡತೊಡಗುವನು. ]

ಒಲವು ಚೆಲುವುಗಳೆರಡು ಸೇರಿ ಸಮರಸವಾಗಿ ಬಣ್ಣವಾಗಲು,–
ಒಲಿದ ಹೃದಯವದು ತಾ ಪಟವಾಗಲು,–
ನೆನಪು ಕೊನರೊಡೆದು ಭಾವಕೆ ರೂಪು ಕೊಡಲು,–
ನನ್ನ ಕಣ್ ಮುಚ್ಚುವೆನು,
ಕಯ್ಯ ಹಿಂದೆಗೆಯುವೆನು,
ಕುಂಚ ಕೆಳಗಿಡುವೆ,
ಬಣ್ಣವಾರಿಸುವೆ;
ರೂಪು — ರಮಣಿಯ ಮನೋಹರ ರೂಪು,
ನನ್ನೊಲವು ಪೆಣ್, ಚಿತ್ರಕಲೆಯ ಕೈಪಿಡಿದು,
ಮನದ ಮುಸೆಯನು ಬಿಟ್ಟು,
ಮರೆವ ತೆರೆಯನು ಹರಿದು,
ಹೃದಯಪೀಠವನುಳಿದು,
ಚಿತ್ರದಲಿ ಮೈದಳೆದು,
ಮೆರೆಯುವಳು ಹೊಳೆದು,
ಹೊಳೆದು ಹೊಳೆಹೊಳೆದು.

[ ಹೊರಗೆ ಯಾರೋ ಬಾಗಿಲನ್ನು ತೆರೆದು ನಡೆದು ಬರುವ ಸದ್ದು ಕೇಳಿಸುವುದು. ]

ಬಾ ರಮಣಿ, ಬಾ ರಮಣಿ,
ಕಾಯುತಿಹೆ ನಿನಗಾಗಿ—
ಬಹಳ ಹೊತ್ತಾಯ್ತು.

[ ಹೊತ್ತಾಯ್ತು ಎನ್ನುವಾಗ ಗೋವಿಂದರಾಯ ಸುಶೀಲೆ ಪ್ರವೇಶಿಸುವರು. ಗೋವಿಂದ ರಾಯನ ವಯಸ್ಸು ೩೫—೪೦ ರ ಹತ್ತಿರ ಹತ್ತಿರ ರೂಪವಂತನಲ್ಲ. ಸುಶೀಲೆಯ ವಯಸ್ಸು ೨೦—೨೨. ಸುಶೀಲೆ ಚೆಲುವೆ ಎಂದರೆ ಸಾಕು ಗೋವಿಂದರಾಯನ ಉಡುಪಿನಿಂದ ಅವನು ಸಿರಿವಂತನೆಂದು ನೋಡಿದ ಕೂಡಲೆ ಹೇಳಬಹುದು. ಸುಶೀಲೆಯೂ ಬೆಲೆಬಾಳುವ ಉಡಿಗೆತೊಡಿಗೆ ಧರಿಸಿಕೊಂಡಿರುತ್ತಾಳೆ ]

ಗೋವಿಂದರಾಯ:—ಹೌದು. ಬಹಳ ಹೊತ್ತಾಯ್ತು. ದಯವಿಟ್ಟು ಕ್ಷಮಿಸಬೇಕು.

ರಮೇಶ:—( ತಟಕ್ಕನೆ ಕತ್ತೆತ್ತಿ) ಓಹೋ, ಗೋವಿಂದರಾಯರೇ, ದಯ ಮಾಡಬೇಕು. ನಿಮಗಾಗಿಯೇ ಕಾದಿದ್ದೆ. ಸುಶೀಲಾಬಾಯಿ, ದಯಮಾಡಬೇಕು. ಕೂತುಕೊಳ್ಳಿ.

ಗೋವಿಂದ:—(ಚಿತ್ರದ ಬಳಿಗೆ ಬಂದು) ಭೇಷ್ ! ಸುಶೀಲಾ, ನೋಡು, ನಿನ್ನ ನೀನು ನೋಡು. ನಿನಗಿಂತಲೂ ನಿನ್ನ ಚಿತ್ರ ಚೆನ್ನೋ, ಚಿತ್ರಕ್ಕಿಂತಲೂ ನೀನು ಚೆನ್ನೋ ನನಗೆ ಹೇಳುವುದು ಕಷ್ಟ. ಚಿತ್ರ ಚೆನ್ನಾಗಿದೆ ಎಂದರೆ ಸುಶೀಲೆಯನ್ನು ಕಡೆಗಣಿಸಿದಂತೆ; ಸುಶೀಲೆಯೇ ಚೆನ್ನು, ಆದ್ದರಿಂದ ಚಿತ್ರ ಚೆನ್ನಾಗಿದೆ ಅಂದರೆ ( ರಮೇಶನ ಕಡೆಗೆ ತಿರುಗಿ ) ನಿಮ್ಮ ಕಲೆಯ ಕೈಗಾರಿಕೆಯನ್ನು ಕಡೆ ಗಣಿಸಿದಂತೆ. ಆದ್ದರಿಂದ, ನನ್ನ ಮಡದಿಯ ನಿಮ್ಮ ಚಿತ್ರ ಚೆನ್ನಾಗಿದೆ ಅನ್ನುತ್ತೇನೆ. ಸರಿಯೇ ?

ರಮೇಶ:—( ಹುಸಿನಗೆ ನಕ್ಕು ) ನಿಮ್ಮ ಮಡದಿಯ ನನ್ನ ಚಿತ್ರ ಎನ್ನುವಿರಾ? ( ಸುಶೀಲೆ ಬೇರೆ ಕಡೆಗೆ ತಿರುಗಿಕೊಳ್ಳುವಳು. ಅತ್ತ ಇತ್ತ ಸುತ್ತಾಡುವಳು. )

ಗೋವಿಂದ:—ಆಹಾ ! ನಾನು ಹೇಳಿದ್ದು ಸರಿ ತಾನೇ ? ನಾನು ಸ್ವಲ್ಪ ಮಾತುಗಾರ. ನನಗೆ ಸಂಕೋಚ ಕಡಮೆ. ಇನ್ನೂ ಪ್ರೀತಿಯಿಂದ – ಸುಶೀಲೆ, ಕೇಳು ಇಲ್ಲ – ಇನ್ನು ಪ್ರೀತಿಯಿಂದ ಹೇಳುವುದಾದರೆ: ನಿಮ್ಮ – ಅಲ್ಲ – ನನ್ನ ನಲ್ಲೆಯ ನಿಮ್ಮ ಚಿತ್ರ ಎನ್ನಬಹುದು.

ರಮೇಶ:—ಸಲ್ಲೆ !

ಗೋವಿಂದ:—ಅಲ್ಲವೇನು ? ಪ್ರೀತಿಯಿಂದ ಹೇಳಿದ ಮಾತು.

ಸುಶೀಲೆ:—(ಈ ಕಡೆಗೆ ತಿರುಗಿ) ಸುಮ್ಮನಿರಿ; ಸಾಕು ನಿಮ್ಮ ಮಾತುಗಾರಿಕೆ. ಅವರ ಹೊತ್ತು ಕಳೆಯುವುದಕ್ಕೆ ನಾವು ಇಲ್ಲಿ ಬಂದಿಲ್ಲ.

ಗೋವಿಂದ:—ಬಹಳ ಕೋಪ ಸುಶೀಲೆಗೆ. ಯಾವಾಗಲೂ ಹೀಗೆಯೇ. ಇವೊತ್ತೆ ಕೊನೆಯ ದಿನ. ನಿಮ್ಮ ಕೂಡ ಸ್ವಲ್ಪ ಸಂತೋಷವಾಗಿ ಒಂದೆರಡು ಮಾತನಾಡೋಣ ಎಂದರೆ ರೇಗುತ್ತಾಳೆ ನೋಡಿ. ಕ್ಷಮಿಸಬೇಕು. ಇನ್ನು ನಿಮ್ಮ ಹೊತ್ತು ಕಳೆಯುವುದಿಲ್ಲ. ಚಿತ್ರ ಪೂರೈಸಿದೆಯೋ ಇಲ್ಲ – ಇನ್ನೂ ಸ್ವಲ್ಪ ಬಾಕಿ ಇದೆಯೋ ?

ರಮೇಶ:—ಇವೊತ್ತಿಗೆ ಪೂರೈಸಿದ ಹಾಗೇ ಸರಿ. ಇನ್ನು ಕಾಲು ಗಂಟೆಯ ಕೆಲಸ ಇದೆ ರಾಯರೆ, ಅಷ್ಟೆ. ಆದರೆ, ಇದುವರೆಗೆ ನಾನು ಬರೆದದ್ದೆಲ್ಲ ಬರಿಯ ಬಣ್ಣದಿಂದ — ಇಂದು ಚಿತ್ರಕ್ಕೆ ಜೀವರಸ ತುಂಬಬೇಕು. ಅದನ್ನು ನಲಿಸಬೇಕು, ನಗಿಸಬೇಕು.

ಗೋವಿಂದ:—(ಚಿತ್ರದ ಹತ್ತಿರಕ್ಕೆ ಹೋಗಿ ನೋಡಿ ನೋಡಿ) ಹೌದು ಹೌದು– ನೀವು ಹೇಳಿದ ಹಾಗೆ ಚಿತ್ರವನ್ನು ನಲಿಸಬೇಕು, ನಗಿಸಬೇಕು. ಬಣ್ಣ ಬಹು ಚೆನ್ನಾಗಿ ಮೆರಗುಗೊಂಡಿದೆ; ರೂಪು ಬಹು ಚೆನ್ನಾಗಿ ಮೂಡಿದೆ. ಆದರೆ – ಸುಶೀಲೆ, ನೀನು ನಗಬೇಕು, ತಿಳಿಯಿತೋ ?

ಸುಶೀಲೆ:—ನೀವು ಅವರ ಕೆಲಸಕ್ಕೆ ಆಸ್ಪದವೇ ಕೊಡುತ್ತಿಲ್ಲ. ಹಾಳು ಹರಟೆ.

ಗೋವಿಂದ:—ನನ್ನ ಹತ್ತಿರ ನೀನು ಪ್ರತಿದಿನವೂ ಹೀಗೆ ಮುನಿಸಿಕೊಂಡು ಆಡುತ್ತಿದ್ದದ್ದಕ್ಕೇ ಈ ಚಿತ್ರದ ಅವಸ್ಥೆ ಹೀಗಾಗಿದೆ. ಇವತ್ತಾದರೂ ಸ್ವಲ್ಪ ನಗಬಾರದೆ, ನಲಿಯಬಾರದೆ ?

ಸುಶೀಲೆ:—ಇಲ್ಲ. ಆಗುವುದಿಲ್ಲ.

ಗೋವಿಂದ:—ಸ್ವಲ್ಪ - ಸ್ವಲ್ಪ -

ಸುಶೀಲೆ:—ಇಲ್ಲಾ !

ಗೋವಿಂದ:—ಹಾಗಾಡಬಾರದು.

ಸುಶೀಲೆ:—ನಿಮ್ಮ ಸಂಗಡ ಇರುವ ವರೆಗೂ ನಾನು ನಗಲಾರೆ.

ಗೋವಿಂದ:—ನಾನು ಮನೆಗೆ ಹೋಗಿ ಬರುತ್ತೇನೆ ಹಾಗಾದರೆ. ರಮೇಶ್, ದಯಮಾಡಿ ಇವೊತ್ತು ಚಿತ್ರವನ್ನು ಕೊಟ್ಟುಬಿಡಿ; ಇಲ್ಲದಿದ್ದರೆ ನನ್ನ ಮನಸ್ಸಿಗೆ ಸಮಾಧಾನವಿಲ್ಲ ನೋಡಿ, ರಮೇಶ್. ಕೊನೆಗೂ ನನ್ನದಾಯಿತು ಅಪರಾಧ. ನಿಮ್ಮ ಕೈಯಿಂದಲೇ ಬರೆಸಬೇಕೆಂದವಳು ಅವಳು. ಈಗ ಹೀಗೆ ಆಡುತ್ತಾಳೆ. (ಸುಶೀಲೆಯ ಕಡೆ ತಿರುಗಿ) ಸುಶೀಲೆ, ಚಿತ್ರ ಕೆಟ್ಟರೆ, ಅದಕ್ಕೆ ನಾನಾಗಲೀ ರಮೇಶರಾಗಲೀ ಹೊಣೆಯಲ್ಲ. ಚಿತ್ರ ಕೆಡಿಸಿ ಅವರ ಹೆಸರು ಕೆಡಿಸಬೇಡ.

ಸುಶೀಲೆ:—ನನಗೆ ಚಿತ್ರ ಬೇಡ. ನನ್ನ ಚಿತ್ರ ನೋಡಿ, ಅದು ಎಷ್ಟು ಅದ್ಭುತವಾಗಿದೆ ಎನ್ನುವುದು ನೋಡಿ, ನನಗೇ ಹೆದರಿಕೆಯಾಗುತ್ತಿದೆ. ನನಗೆ ಚಿತ್ರ ಬೇಡ, ನಡೆಯಿರಿ ಮನೆಗೆ.

ರಮೇಶ:—ಸುಶೀಲಾಬಾಯಿ, ಸ್ವಲ್ಪ ಸಮಾಧಾನಗೊಳ್ಳಿ. ನಿಮ್ಮ ಕಳವಳಕ್ಕೆ ಕಾರಣ ನನಗೆ ಗೊತ್ತಿದೆ.

ಗೋವಿಂದ:—(ಉತ್ಸುಕತೆಯಿಂದ) ರಮೇಶ್, ಹಾಗಾದರೆ ದಯಮಾಡಿ ಅವಳನ್ನು ಸಮಾಧಾನಪಡಿಸಿ — ನೀವು ಹೇಳಿದ ಹಾಗೆ ಅವಳು ಕೇಳುತ್ತಾಳೆ; ನನ್ನಿಂದ ಸಾಧ್ಯವಿಲ್ಲ. ಅವಳು ನಾನು ಮನೆಗೆ ಹೋಗಬೇಕೆಂದರೆ ಹೋಗುತ್ತೇನೆ. ಅವಳನ್ನು ಸಂತೋಷಪಡಿಸಿ, ಚಿತ್ರ ಚೆನ್ನಾಗಲಿ.

ಸುಶೀಲೆ:—ನೀವು ಮನೆಗೆ ಹೋಗಕೂಡದು.

ಗೋವಿಂದ:—ಹಾಗಾದರೆ ಚಿತ್ರ ಚೆನ್ನಾಗುವುದಿಲ್ಲ.

ಸುಶೀಲೆ:—ನೀವು ಇಲ್ಲೇ ಇರಬೇಕು.

ಗೋವಿಂದ:—ನನ್ನ ಸಂಗಡ ಇದ್ದರೆ ನಿನ್ನ ಮುಖ ಪ್ರಸನ್ನವಾಗಿರುವುದಿಲ್ಲವೆಂದು ನೀನೇ ಹೇಳಲಿಲ್ಲವೇ !

ರಮೇಶ:—(ಶಿವಶಂಕರನು ಬಂದು ಎಡಗಡೆಯ ಕೊಠಡಿಗೆ ಹೋಗುವದರಲ್ಲಿರುವನು.) ರಾಯರೇ, ನಾನೊಂದು ಉಪಾಯ ಹೇಳುತ್ತೇನೆ. ಅದನ್ನು ನಡಸಿಕೊಟ್ಟರೆ ನಮ್ಮ ಇಬ್ಬರ ಇಷ್ಟಾರ್ಥವೂ ಸಿದ್ಧಿಸುತ್ತದೆ.

ಸುಶೀಲೆ:—ರಮೇಶ್ ! (ಎಂದು ಸಿಲ್ಲಿಸುವಳು.)

ಗೋವಿಂದ:—ಸುಶೀಲೆ–ನಿನಗೆ ಇವರೊಡನೆ ಸಲಿಗೆಯಿದೆ. ರಮೇಶರೇ, ಎಷ್ಟೋ ಸಲ ಹೇಳಿದ್ದಾಳೆ ಸುಶೀಲೆ ನಿಮ್ಮ ವಿಚಾರ

ರಮೇಶ:—ಹಾಗೇನು ?

ಗೋವಿಂದ:—ಕಾಲೇಜಿನಲ್ಲಿ ನೀವಿಬ್ಬರೂ ಒಟ್ಟಿಗೆ ಓದುತ್ತಿದ್ದವರಂತೆ.

ರಮೇಶ:—ಹೌದು.

ಗೋವಿಂದ:—ಕಾಲೇಜಿನಲ್ಲಿ ಇಬ್ಬರೂ ಒಟ್ಟಿಗೆ ಟೆನ್ನಿಸ್ ಆಡುತ್ತಿದ್ದರಂತೆ.

ರಮೇಶ:—ಹೌದು.

ಗೋವಿಂದ:—ಚಿತ್ರಕಲೆಯ ಹವ್ಯಾಸಕ್ಕೆ ಬಿದ್ದು ನಿಮಗೆ ಫೇಲಾಯಿತಂತೆ. ಪ್ಲ್ಯಾಸು ಮಾಡುವುದಕ್ಕೆ ಇಷ್ಟವಿಲ್ಲದ್ದರಿಂದ ಅವಳಿಗೆ ಫೇಲಾಯಿತಂತೆ. ಒಂದು ಸಲ ಬೋರ್ಡಿನ ಮೇಲೆ ನೀವು ಸುಶೀಲೆಯ ಚಿತ್ರವನ್ನು ಬರೆದದ್ದರಿಂದ ನಿಮ್ಮಿಬ್ಬರನ್ನೂ ಕ್ಲಾಸಿನಿಂದ ಓಡಿಸಿದ್ದರಂತೆ. (ನಗುವನು.) ಅಂದಿನಿಂದ ಅವಳಿಗೆ ನಿಮ್ಮ ಸ್ನೇಹವಂತೆ.

ರಮೇಶ:—ಹೌದು.

ಗೋವಿಂದ:—ನೋಡಿ, ರಮೇಶ್, ನೀವು ಸುಶೀಲೆಯ ಸ್ನೇಹಿತರು ಎಂದು ತಿಳಿದ ಮೇಲಂತೂ ನಿಮ್ಮ ಕಲೆಯಲ್ಲಿ ನನಗೆ ಬಹು ಅಭಿಮಾನ ಹುಟ್ಟಿದೆ. ನಾನೂ ಚಿಕ್ಕಂದಿನಲ್ಲಿ ಸ್ವಲ್ಪ ಗೆರೆಬರೆ ಎಳೆಯುತ್ತಿದ್ದೆ. ಆದರೆ ಅಷ್ಟಕ್ಕೇ ಬಿಟ್ಟುಬಿಟ್ಟೆ ಅನ್ನಿ. ನಮ್ಮ ದೇಶದಲ್ಲಿ ಅಭಿಮಾನ ಕಡಮೆ ಸ್ವಾಮಿ. ನಾಟಕದಲ್ಲಿ ಪಾರ್ಟು ಮಾಡುವವರು, ಸಂಗೀತಗಾರರು, ಚಿತ್ರಗಾರರು ಎಲ್ಲ ಒಂದು ಜಾತಿ ನಮ್ಮಲ್ಲಿ; ಇವರೆಲ್ಲ ಸ್ವಲ್ಪ ದಾರಿ ತಪ್ಪಿದವರು ಎಂತ ನಮ್ಮವರ ಭಾವನೆ. ನನಗೆ ಇದು ಕಂಡರೆ ಆಗುವುದಿಲ್ಲ ನೋಡಿ. ಬಹಳ ಉತ್ತಮವಾದ ವಸ್ತು ಯಾವಯಾವುದಿದೆಯೊ —

(ಮುಕೀಲೆಯ ಕಡೆ ತಿರುಗಿ ನೋಡುವನು; ಅವಳು ಮುಖ ಸಿಂಡರಿಸುವಳು.)
ಅದೆಲ್ಲಾ ನನಗೆ ಬೇಕು. ನನಗೆ ಕಳಪೆ ಸಂಗೀತ ಅಂದರೆ ಆಗುವುದಿಲ್ಲ, ಕಳಪೆ ನಾಟಕ ಅಂದರೆ ಆಗುವುದಿಲ್ಲ. ಸೀಮೆಯ ಥಳುಕೂ ನನಗೆ ಸೇರುವುದಿಲ್ಲ, ನೋಡಿ. ಆದರೆ ಅವರ ಕಲೆ ಉತ್ತಮವಾದ್ದು. ಗುಣಕ್ಕೆ ಯಾಕೆ ಮಾತ್ಸರ್ಯ? ನೀವು ಸೀಮೆಗೆ ಹೋಗಬೇಕು ಸ್ವಾಮಿ. ನೋಡಿ, ಒಬ್ಬ ಹುಡುಗ ಇದ್ದ. ಚೆನ್ನಾಗಿ ಹಾಡುತ ಇದ್ದ. ದುಡ್ಡು ಕೊಟ್ಟು ಸಂಗೀತ ಪಾಠ ಹೇಳಿಸಿ ಅವನನ್ನು ದೊಡ್ಡ ಸಂಗೀತಗಾರ ಮಾಡಬೇಕು ಎಂತ ಎಷ್ಟೋ ಪ್ರಯತ್ನಪಟ್ಟೆ. ಮುಂದಕ್ಕೂ ಬರುವುದರಲ್ಲಿದ್ದ. ಅಷ್ಟರಲ್ಲೇ ನೋಡಿ, ಇದ್ದಕ್ಕಿದ್ದ ಹಾಗೇ ಸತ್ತುಹೋದ. ನಾಟಕದ ಕಂಪನಿಯಲ್ಲೊಬ್ಬ ಬಹು ಚೆನ್ನಾಗಿ ರಾಣಿಪಾರ್ಟು ಮಾಡುತ್ತಿದ್ದ, ನೋಡಿ. ಆದರೆ ತುಂಬ ಬಡವ. ನಾಟಕದ ಕಂಪೆನಿಯವರ ವರಮಾನ ಗೊತ್ತೇ ಇದೆಯಲ್ಲ. ಏನೋ ಹೇಗೋ ಆತನ ಮೇಲೆ ಕನಿಕರವಾಯ್ತು. ಎರಡು ವರ್ಷ ಅವನನ್ನು ತಮ್ಮಸಂತೆ ಸಲಹಿದೆ. ಅವನೂ ಸತ್ತುಹೋದ. ಇಂಥವರೆಲ್ಲ ಮುಂದಕ್ಕೆ ಬರಬೇಕೂ ಅಂತ ನನ್ನ ಹಂಬಲು ನೋಡಿ. ನನಗೂ ಏನೋ ಪಿತ್ರಾರ್ಜಿತ ಸ್ವತ್ತು ತಕ್ಕಮಟ್ಟಿಗೆ ಇದೆ ಅನ್ನಿ. ನಾನು ದುಡ್ಡಿಗೆ ಹಿಂದೆಗೆಯುವುದಿಲ್ಲ ನೋಡಿ. ಈಗ ನಿಮ್ಮನ್ನು ಕಂಡರೂ ಹಾಗೆ — ಒಂದು ರೀತಿ ಅಭಿಮಾನ ಉಂಟಾಗಿದೆ. ನೀವು ಸೀಮೆಗೆ ಹೋಗಬೇಕು ರಮೇಶ್. ನೀವು ಪ್ರಪಂಚದಲ್ಲೆಲ್ಲ ಹೆಸರಾದ ಚಿತ್ರಗಾರರಾಗುತ್ತೀರಿ. ಅದಿರಲಿ: ಇಲ್ಲಿ ಬಂದ ದಿನವೇ ಕೇಳಿದೆ; ನಿಮ್ಮ ಚಿತ್ರ ಯಾವುವೂ ಇಲ್ಲಿ ಹೆಚ್ಚಾಗಿ ಕಾಣುವುದೇ ಇಲ್ಲವಲ್ಲ? ಅವು ಯಾವುವು?— ತೆರೆ ಹಾಕಿದ್ದೀರಲ್ಲ? ಧೂಳು ಬೀಳುತ್ತೆ ಎಂತಲೋ? ಇಲ್ಲವೆ ಯಾರೂ ನೋಡಕೂಡದು ಎಂತಲೋ? ಇನ್ನೂ ಅರೆಗೆಲಸ ವಾಗಿದ್ದರೆ ತೋರಿಸಬೇಕಾಗಿಲ್ಲ. ಅಂದಹಾಗೆ, ಆಮೇಲೆ ನಿಧಾನವಾಗಿ ನಿಮ್ಮ ಚಿತ್ರಗಳನ್ನೆಲ್ಲ ನೋಡಬೇಕು ರಮೇಶ್. ಅವಕಾಶ ಕೊಡುತ್ತೀರಿ ತಾನೆ?

ರಮೇಶ:—ಅಗತ್ಯವಾಗಿ. ನಿಮ್ಮಂತಹ ರಸಿಕರಿಗೆ ಅವನ್ನು ತೋರದೆ ಮತ್ತೆ ಯಾರಿಗೆ ತೋರಬೇಕು ?

ಗೋವಿಂದ:—ನೋಡು ಸುಶೀಲೆ. ಸಲಿಗೆಯಿಲ್ಲದಿದ್ದರೂ ನಾನು ರಮೇಶರೊಡನೆ ಎಷ್ಟು ಮಾತಾಡಿದ್ದೇನೆ. ಅಷ್ಟು ಸಲಿಗೆ ಯಿದ್ದೂ ಅವರೊಡನೆ ನೀನು ಇವೊತ್ತಿನವರೆಗೆ ಯಾವ ಮಾತನ್ನೂ ಆಡದೆ ಇದ್ದದ್ದು ಕಂಡು ನನಗೆ ಆಶ್ಚರ್ಯವಾಗಿದೆ. ನಾನಾಗಿದ್ದಿದ್ದರೆ ಕೋಪಿಸಿಕೊಂಡು ನಿನ್ನನ್ನು ಹಂಗಿಸುತ್ತಿದ್ದೆ. ನಿನ್ನ ಸ್ನೇಹಿತರಿಗೆ ನೀನು ಅಪಮಾನ ಮಾಡಿದ್ದೀಯೆ. ಅವರ ಕ್ಷಮೆ ಕೇಳಿಕೋ.

ಸುಶೀಲೆ:—ಅಪಮಾನ ಮಾಡಿಲ್ಲ. ಆದರೆ ಅಪರಾಧ ಮಾಡಿದ್ದೇನೆ.

ಗೋವಿಂದ:—ಅಪರಾಧಕ್ಕಾದರೂ ಕ್ಷಮೆ ಕೇಳಿಕೊಳ್ಳಬೇಕು.

ಸುಶೀಲೆ:—ಆಗಲಿ. ಕ್ಷಮೆ ಬೇಡಿದ್ದೇನೆ.

ಗೋವಿಂದ:—ಸರಿಯೆ. ಇನ್ನು ನಾನು ಮನೆಗೆ ಹೋಗುತ್ತೇನೆ.

ಸುಶೀಲೆ:—ಎಷ್ಟು ಸಲ ಹೇಳಲಿ: ನಾನೂ ಮನೆಗೆ ಬರುತ್ತೇನೆ; ಇಲ್ಲವೆ ನೀವೂ ಇಲ್ಲಿಯೇ ಇರಬೇಕು.

ರಮೇಶ:—ಅನಾವಶ್ಯಕವಾಗಿ ಮಾತು ಬೆಳಸಿ ನಾನು ಅಪರಾಧ ಮಾಡಿದ್ದೇನೆ. ತಾವಿಬ್ಬರೂ ಮನೆಗೆ ಹೋಗಬಹುದು. ಚಿತ್ರವನ್ನು ಪೂರೈಸಿ ಮನೆಗೆ ಕಳಿಸಿಕೊಡುತ್ತೇನೆ.

ಗೋವಿಂದ:—ಚಿತ್ರ ಸರ್ವಭಾಗದಲ್ಲಿಯೂ ಚೆನ್ನಾಗುವುದೋ ?

ರಮೇಶ:—ನಾನು ಹೇಗೆ ಹೇಳಲಿ.

ಗೋವಿಂದ:—ಸುಶೀಲೆ, ಹಟಮಾಡಬೇಡ. ನಾನು ಎಂದು ನಿನ್ನ ಮನಸ್ಸು ನೋಯಿಸಿದ್ದೇನೆ. ನಾನು ಹೇಳಿದ ಹಾಗೆ ಕೇಳಬಾರದೆ? ರಮೇಶರು ನೀನು ಅರಿಯದವರೆ? ಕಾಲುಗಂಟೆ ಇಲ್ಲಿ ಇದ್ದು ರಮೇಶರ ಇಷ್ಟದಂತೆ, ನನ್ನ ಇಷ್ಟದಂತೆ ನಡೆದುಕೊಳ್ಳಬಾರದೆ? (ಸುಶೀಲೆ ಸುಮ್ಮನಿರುವಳು.) ಹಾಗಾದರೆ ನಾನಿನ್ನು ಹೋಗಿಬರುತ್ತೇನೆ.

ಸುಶೀಲೆ:—ನೀವು ಹೋಗಕೂಡದು.

ಗೋವಿಂದ:—ಮತ್ತೆ ಅದೇ ಸಮಸ್ಯೆ.

ರಮೇಶ:—ರಾಯರೆ, ನನ್ನ ಸಲಹೆಯೊಂದಿದೆ. ನೀವು ಸ್ವಲ್ಪ ಉದಾರ ಮನಸ್ಸಿನಿಂದ, ಬೇಸರಪಟ್ಟುಕೊಳ್ಳದೆ ನಡಸಿಕೊಡಬೇಕು.

ಗೋವಿಂದ:—ಅದೇನು, ಆಗತ್ಯವಾಗಿ ಆಗಬಹುದು.

ರಮೇಶ:—ನೀವು ನನ್ನ ಎಲ್ಲ ಚಿತ್ರಗಳನ್ನೂ ನೋಡಬೇಕೆನ್ನುತ್ತೀರಿ. ಈಗಲೇ ನೋಡಬಹುದಲ್ಲ?

ಗೋವಿಂದ:—ಆಗಬಹುದು. ಆದರೆ........ನಿಮ್ಮ ಕೆಲಸಕ್ಕೆ ತೊಂದರೆ ಯಾದೀತೋ ಏನೋ?

ರಮೇಶ:—ಏನೂ ಇಲ್ಲ. ಚಿತ್ರಗಳು ಬೇರೆಯ ಕೊಟಡಿಯಲ್ಲಿವೆ. ಕೆಲಸಮಾಡುವ ಸ್ಥಳದಲ್ಲೇ ಎಲ್ಲ ಚಿತ್ರಗಳನ್ನೂ ಹಾಕಿಕೊಂಡರೆ ಬುದ್ಧಿ ಓಡುವುದಿಲ್ಲ. ಎಲ್ಲ ಚಿತ್ರಗಳ ಮೇಲೂ ಕಣ್ಣು ಹರಿಯು ತ್ತಿರುತ್ತದೆ, ಕೆಲಸ ಸಾಗುವುದಿಲ್ಲ.

ಗೋವಿಂದ:—ಹಾಗಾದರೆ ನಾನು ನಿಮ್ಮ ಚಿತ್ರಗಳನ್ನು ನೋಡುತ್ತಿರು ತ್ತೇನೆ. ನೀವು ಆ ಹೊತ್ತಿಗೆ ಸುಶೀಲೆಯ ಚಿತ್ರ ಪೂರೈಸ ಬಹುದು.

ರಮೇಶ:—ಇದು ಸುಶೀಲಾಬಾಯಿಗೆ ಒಪ್ಪಿಗೆಯೋ?

ಗೋವಿಂದ:—ಏನು ಸುಶೀಲೆ?

ಸುಶೀಲೆ:—ಆಗಬಹುದು.

ಗೋವಿಂದ:—ಸದ್ಯ, ಸಮಸ್ಯೆ ಬಗೆಹರಿಯಿತು. ಕಾರ್ಯ ಸುಗಮ ವಾಯಿತು ಇನ್ನು. ಎಲ್ಲಿ ನಿಮ್ಮ ಚಿತ್ರಗಳು? ತೆರೆ ಹಾಕಿರುವ ಚಿತ್ರಗಳನ್ನು ಕಡೆಯಲ್ಲಿ ನೋಡುತ್ತೇನೆ, ಇರಲಿ.

ರಮೇಶ:—ಆಗಬಹುದು. ಚಿತ್ರಗಳು ಕೊಟಡಿಯಲ್ಲಿವೆ. ನಮ್ಮ ಶಿವಶಂಕರ ತೋರಿಸುತ್ತಾನೆ. ಒಂದು ನಿಮಿಷ, ಬಂದೆ.

(ಎಂದು ಶಿವಶಂಕರನನ್ನು ಕರೆದುಕೊಂಡು ಕೋಣೆಯೊಳಕ್ಕೆ ಹೋಗುವನು.)

ಗೋವಿಂದ:—ಸುಶೀಲಾ, ಅದು ಏಕೆ ಹೀಗಾಡಿದೆ?

ಸುಶೀಲೆ:—ನನಗೆ ಗೊತ್ತಿಲ್ಲ.

ಗೋವಿಂದ:—ಮೈಗೆ ಸರಿಯಿಲ್ಲವೆ ಸುಶೀಲಾ?

ಸುಶೀಲೆ:—ಮೈಗೆ ಸರಿಯಾಗಿಲ್ಲದೆ ಏನು?

ಗೋವಿಂದ:—(ಅವಳ ಹಣೆ ಮುಟ್ಟಿ) ಮೈಗೆ ಸರಿಯಾಗಿದೆಯೆ! ಜ್ವರ ಬಂದಂತೆ ಸುಡುತ್ತಿದೆ! ನಿನ್ನ ಉಸಿರು ಎಷ್ಟು ಬಿಸಿಯಾಗಿದೆ? ಮೈಗೆ ಸರಿಯಾಗಿಲ್ಲದಿದ್ದರೆ ಹೇಳು. ರಮೇಶನು ಏನೂ ತಿಳಿದುಕೊಳ್ಳುವುದಿಲ್ಲ; ನಾಳೆ ಬೇಕಾದರೆ ಬರೋಣ.

ಸುಶೀಲೆ:—ಬೇಡ. ಎಲ್ಲವೂ ಇವೊತ್ತೆ ಕೊನೆಗಾಣಲಿ.

ಗೋವಿಂದ:—ಹಾಗೆಯೇ ಆಗಲಿ. ನೀನು ಹೇಳಿದ ಹಾಗೆ. ನೀನು ನನ್ನ ರಾಣಿಯಲ್ಲವೆ? (ಎಂದು ಸುಶೀಲೆಯ ಗಲ್ಲ ಹಿಡಿಯಲು ಹೋಗುವನು. ಅವಳು ಅವನ ಕೈ ಕೊಡಹಿ ಮುಖ ತಿರುಗಿಸಿಕೊಳ್ಳುವಳು.)

[ರಮೇಶ ಬರುವನು.]

ರಮೇಶ:—ಒಳಕ್ಕೆ ದಯಮಾಡಿಸಬಹುದು (ಎಂದು ಎಡಕೋಣೆಯ ಕಡೆಗೆ ಕೈ ತೋರಿಸುವನು.)

ಗೋವಿಂದ:—ನಿಮ್ಮ ಕೈಲಿದೆ ರಮೇಶ್ ಅವಳನ್ನು ನಗಿಸಿ ಚಿತ್ರವನ್ನು ಚೆಲುವು ಮಾಡುವುದು. ನೀವು ಕೇಳಿದ ಬೆಲೆ ಕೊಡಲು ಸಿದ್ಧನಾಗಿದ್ದೇನೆ. (ಎಂದು ಕೋಣೆಗೆ ಹೋಗುವನು. ಕ್ಷಣಹೊತ್ತಿನ ಮೇಲೆ ಕೋಣೆಯ ಬಾಗಿಲ ಅಗುಳಿ ಹಾಕಿದ ಸದ್ದಾಗುವುದು.)

ರಮೇಶ:—ಸುಶೀಲಾ! ಸುಸೀ!

ಸುಶೀಲೆ:—ರಮೇಶ್! ರಮೇಶ್! ಮೆಲ್ಲಗೆ, ಕೇಳಿಸೀತು!

ರಮೇಶ:—ಹೌದು. ಗಟ್ಟಿಯಾಗಿ ಮಾತಾಡಿದರೆ ಆ ಕೊಟಡಿಗೆ ಕೇಳಿಸುತ್ತದೆ. (ದನಿ ಸ್ವಲ್ಪ ತಗ್ಗಿಸಿ) ಸುಸೀ! ನನ್ನ ಸುಸೀ! ಹಾಗೆಂದು ಕರೆಯಬಹುದೇ? ಏಕೆ ಹಾಗೆ ಮಾಡಿದೆ ಹೇಳು, ಬೇಗ ಹೇಳು. ಹೆಚ್ಚು ಹೊತ್ತಿಲ್ಲ.

ಸುಶೀಲೆ:—ಹೌದು ರಮೇಶ್. ಹೆಚ್ಚು ಹೊತ್ತಿಲ್ಲ. ಹೇಳಬೇಕಾದ್ದನ್ನು ಬೇಗ ಹೇಳುತ್ತೇನೆ. ನೀನು ಊರು ಬಿಟ್ಟು ಹೋಗಿದ್ದವನು ಹಿಂದಿರುಗಿದ್ದು ತಿಳಿಯಬಂತು. ನನ್ನ ಭಾವಚಿತ್ರ ನನಗೆ ಬೇಕಾಗಿರಲಿಲ್ಲ. ನೀನು ಬರೆದುಕೊಟ್ಟಿದ್ದ ನನ್ನ ಚಿತ್ರಗಳನ್ನೆಲ್ಲ ಇನ್ನೂ ಇಟ್ಟಿದ್ದೇನೆ. ಅವರಿಗೆ ಬೇಕಾಗಿತ್ತು. ಅವರಂತೂ ನನ್ನ ಭಾವಚಿತ್ರ ಬರಸಬೇಕೆಂದು ಸುಮ್ಮನೆ ಹಾತೊರೆಯುತ್ತಿದ್ದರು. ಚಿತ್ರಕಲೆಯಲ್ಲಿ ಅವರಿಗೆ ತುಂಬ ಪ್ರೀತಿ; ಚಿತ್ರಗಳೆಂದರೆ ಅವರಿಗೆ ಹುಚ್ಚು. ನನಗೆ ಒಳ್ಳೆಯ ಸಂದರ್ಭ ಸಿಕ್ಕಿತು. ನನಗೂ ಚಿತ್ರಕಲೆಯಲ್ಲಿ ಅಪಾರ ಅಭಿಮಾನವಿದೆಯೆಂದು ಹೇಳಿ ನಿನ್ನ ವಿಚಾರ ಅವರಿಗೆ ಹೇಳಿದೆ. ನಿನ್ನಲ್ಲೇ ಬರಸಬೇಕೆಂದು ಒತ್ತಾಯಪಡಿಸಿದೆ. ನೀನು ಬರೆದ ಒಂದೆರಡು ಚಿತ್ರಗಳನ್ನೂ ತೋರಿಸಿದೆ. ಅವನ್ನು ಮೆಚ್ಚಿ, ಕೂಡಲೆ ಒಪ್ಪಿದರು. ನನಗೆ ನೀನು, ನಿನ್ನ ದರ್ಶನ ಬೇಕಾಗಿತ್ತು. ಚಿತ್ರ ಬರಸುವ ನೆಪದಿಂದ ಇಲ್ಲಿಗೆ ಬಂದು ನಿತ್ಯವೂ ನಿನ್ನನ್ನು ನೋಡುತ್ತಿದ್ದೇನೆ. ನಿನ್ನ ನೋಡುವುದು ಇವೊತ್ತು ಕೊನೆಯ ದಿನ, ಅಲ್ಲವೆ ರಮೇಶ್? ಇನ್ನು ನಿನ್ನನ್ನು ಕಾಣುವುದೆಂದೋ! ರಮೇಶ್, ರಮೇಶ್! (ಎಂದು ಕಣ್ಣು ಮುಚ್ಚಿಕೊಂಡು ಅಳುವಳು.)

ರಮೇಶ:—ಸುಸೀ, ಅಳಬೇಡ. ಇದೋ, ಇದೋ—ನಾನು ನಿನ್ನವನು. ನೋಡು, ನೋಡು (ಎಂದು ಗೋಡೆಯ ಬಳಿಗೆ ಹೋಗುವನು. ಒಂದು ಚಿತ್ರದ ತೆರೆಯನ್ನು ಎಳೆದು) ನೋಡು, ಸುಸೀ. ನಿನ್ನನ್ನು ಕಾಲೇಜಿನಲ್ಲಿ ಮೊದಲಸಲ ಕಂಡಾಗ ನೀನು ಹೇಗೆ ಕಾಣುತ್ತಿದ್ದೆ! ಸುಳಿಗುರುಳು, ಕೆದರುಗುರುಳು — ಜ್ಞಾಪಕವಿದೆಯೋ?— ಹಸುರುಸೀರೆ ಉಟ್ಟಿದ್ದೆ (ಸುಶೀಲೆ ಎದ್ದು ಹೋಗಿ ಕುತೂಹಲದಿಂದ ನೋಡತೊಡಗುವಳು) ಸಾದಿನ ಬಟ್ಟು ಇಟ್ಟಿದ್ದೆ—ಕಿವಿಗೆ ಲೋಲಕ್ಕು ಹಾಕಿದ್ದೆ — ಗುಲಾಲು ಬಣ್ಣದ ಜಾಕೆಟ್ — ಅದರ ಮೇಲೆ ಚಿನ್ನದ ಸರ — ಸರಳವಾದ ಮನಸ್ಸು, ಮುಗ್ಧ ನೋಟ. — ಇದೋ ನೋಡು, ಇದು (ಎಂದು ಎರಡನೆಯ ಚಿತ್ರದ ತೆರೆ ತೆಗೆದು)

ಇನ್ನೊಂದು ಚಿತ್ರ: ಒಂದು ವರ್ಷವಾದ ಬಳಿಕ—ನಮ್ಮಿಬ್ಬರಿಗೂ ಸಲಿಗೆ ಬೆಳೆದಾಗ — ನಿನ್ನ ರೂಪಿನಲ್ಲಿ ನಾನು ಒಂದು ಹೊಸತನ ಕಂಡಾಗ–ನಿನ್ನ ಕಣ್ಣಿನಲ್ಲಿ ಒಂದು ಬೆಳಕು ಕಂಡಾಗ–ಆಗ ಬರೆದದ್ದು ಇದು. (ಮೂರನೆಯ ಚಿತ್ರದ ತೆರೆ ಎಳೆದು) ಇದು ಮತ್ತೊಂದು: ಒಹು ಬೆಲೆಬಾಳುವ ಚಿತ್ರ—ನಿನ್ನ ತುಂಬುಗೆನ್ನೆ ಯೌವನವನ್ನು ಹೊರಸೂಸುತ್ತಿದೆ; ನಿನ್ನ ಮಿಂಚುನೋಟ ಪ್ರೇಮಜ್ಯೋತಿಯನ್ನು ಹೊಳೆಯಿಸುತ್ತಿದೆ; ನಿನ್ನ ನಗೆದುಟಿ ಬಳಿಗೆ ಕರೆಯುತ್ತಿದೆ — ನೀನು ನನ್ನನ್ನು ಒಲಿದಾಗ ನೀನು ಇದ್ದುದಂತು.

ಸುಶೀಲೆ:—ರಮೇಶ್, ರಮೇಶಾ! ಬರಿಯ ನೆನಪಿನಿಂದ ಬರೆದೆಯಾ! ಎಂಥ ಅದ್ಭುತವಾದ ಚಿತ್ರಗಳು!

ರಮೇಶ:—ಕಲೆ ಎಂದರೆ ಸೃಷ್ಟಿ. ಹೃದಯದಲ್ಲಿ ತಳೆದಲ್ಲದೆ ಸೃಷ್ಟಿಸಲು ಸಾಧ್ಯವಿಲ್ಲ. ನಿನ್ನನ್ನು—ನಿನ್ನ ಬಿಂಬವನ್ನು ನನ್ನ ಹೃದಯದಲ್ಲಿ ತಳೆದಿದ್ದೆ — ಆದ್ದರಿಂದ ಹಾಗೆ ಬರೆಯಲು ಸಾಧ್ಯವಾಯಿತು. ಸುಸೀ, ಈಗಲೂ ತಳೆದಿದ್ದೇನೆ. ಆದರೆ, ಇದೋ ನೋಡು (ಎಂದು ಬರೆಯುತ್ತಿರುವ ಚಿತ್ರದ ಬಳಿಗೆ ಬಂದು) ಈ ಚಿತ್ರ ಖಿನ್ನವಾಗಿದೆ. ಏಕೆ ಗೊತ್ತೆ?

ಸುಶೀಲೆ:—ನಾನೂ ಖಿನ್ನಳಾಗಿದ್ದೆ. ಅದ್ದರಿಂದ ನನ್ನ ಪ್ರತಿಬಿಂಬವಾದ ಚಿತ್ರವೂ ಹಾಗೆಯೇ ಇದೆ.

ರಮೇಶ:—ಅಷ್ಟೇ ಅಲ್ಲ. ಇದು ನನ್ನ ನಲ್ಲೆಯ ಚಿತ್ರವಲ್ಲ.

ಸುಶೀಲೆ:—ಏನೆಂದೆ?

ರಮೇಶ:—ಹೌದು. ಇದು ನನ್ನ ನಲ್ಲೆಯ ಚಿತ್ರವಲ್ಲ. ಗೋವಿಂದರಾಯರ ಮಡದಿಯ ಚಿತ್ರ. ನನ್ನ ಹೃದಯದಲ್ಲಿ ನೆಲಸಿರುವ ಪ್ರೇಮಮೂರ್ತಿಯನ್ನು ಹೊರಗೆಳೆದು ತಂದು, ನನ್ನ ನಲ್ಲೆಯ ಚಿತ್ರವನ್ನು ಬರೆದು, ಗೋವಿಂದರಾಯರಿಗೆ ಕೊಡಲೆ? ಈ ಚಿತ್ರವನ್ನು ನೀನು ಮೆಚ್ಚುತ್ತೀಯ? ನೋಡು: ಕಣ್ಣಿನಲ್ಲಿ ಹಣ

ದಾಸೆ ಕಿಚ್ಚಿನಂತೆ ಉರಿಯುತ್ತಿದೆ. ಕೆನ್ನೆ ಬತ್ತಿದೆ. ತುಟಿಗಳ ಹುಸಿನಗೆ ಕೃತಘ್ನತೆಯನ್ನು ಉಗುಳುತ್ತಿವೆ. ಇದು ಹೇಗೆ ನನ್ನ ನಲ್ಲೆಯ ಚಿತ್ರವಾಗಬಲ್ಲದು? ನನ್ನ ನಲ್ಲೆಯ ಚಿತ್ರ ಅವು. ನಿನ್ನ ಪತಿ ಈ ಚಿತ್ರವನ್ನೇ ಮೋಹಿಸಿ ಮೋಹಿಸಿ ಹಿಗ್ಗುತ್ತಿದ್ದಾರೆ. ಏಕೆ? ಅದು ತನ್ನ ಮಡದಿಯ ಚಿತ್ರವೆಂದು. ಆದರೂ ಮುಖ ದಲ್ಲಿ ಮೂಡಿರುವ ಖಿನ್ನತೆಯ ಅರಿವು ಅವನಿಗಾಗಿದೆ. ಆದರೆ ಕಾರಣ ಗೊತ್ತಿಲ್ಲ. ಆ ಚಿತ್ರಗಳ ಬೆಲೆ ನನ್ನ ಒಲವು; ಅವು ಅಮೂಲ್ಯವಾದವು. ಈ ಚಿತ್ರದ ಬೆಲೆ ಹಿಡಿಹೊನ್ನು — ಹಿಡಿ ಮಣ್ಣು. ಬೆಲೆ ಕೊಟ್ಟು ಕೊಂಡ ಬೆಲೆವೆಣ್ಣಿನ ಚಿತ್ರದ ಬೆಲೆ ಹಿಡಿಮಣ್ಣು.

ಸುಶೀಲೆ: — ಸಾಕು, ರಮೇಶ್, ಸಾಕು; ನಿಲ್ಲಿಸು.

ರಮೇಶ: — ನಿಲ್ಲಿಸಬೇಕೆ, ಸುಶೀಲೆ. ಎಷ್ಟು ಆಡಿದರೂ ಸಾಲದು ನೀನು ನನಗೆ ಮಾಡಿರುವ ಅನ್ಯಾಯಕ್ಕೆ. ನೀಚೆ, ಕೃತಘ್ನೆ ನೀನು.

ಸುಶೀಲೆ: — ಹೌದು, ರಮೇಶ — ನೀನು ಹೇಳಿದಂತೆ ನಾನು ನೀಚೆ — ಬೆಲೆವೆಣ್ಣು. ರಮೇಶಾ, ರಮೇಶಾ — ಆದರೆ ನೀನು ಏನು ಬೇಕಾದರೂ ಅನ್ನು — ಅನ್ನಿಸಿಕೊಳ್ಳಲು ಸಿದ್ಧಳಾಗಿದ್ದೇನೆ. ಆದರೆ — ರಮೇಶ್, ರಮೇಶ್ — ನನ್ನ ಹೃದಯವನ್ನು ಬಿಚ್ಚಿ ತೋರಿಸಬಹುದಾದರೆ ಬಿಚ್ಚಿ ತೋರಿಸುತ್ತಿದ್ದೆ — ನೀನೇ ನನ್ನ ದೈವ, ನನ್ನ ಸರ್ವಸ್ವ.

ರಮೇಶ: — ಸುಳ್ಳು, ಸುಳ್ಳು. ಹಾಗಾದರೆ ಅವನನ್ನು — ಆ ಮುದಿಯ ನನ್ನು — ಏಕೆ ಮದುವೆಯಾದೆ?

ಸುಶೀಲೆ: — ನಾನು ಅವರನ್ನು ಮದುವೆಯಾಗಲಿಲ್ಲ, ರಮೇಶ್; ಬೆಲೆ ಕೊಟ್ಟು ಅವರು ನನ್ನನ್ನು ಕೊಂಡುಕೊಂಡರು. ನಾನು ಅವರ ಮಡದಿಯಲ್ಲ, ನಲ್ಲೆಯೂ ಅಲ್ಲ: ನೀನು ಅಂದಂತೆ, ಬೆಲೆವೆಣ್ಣು; ಅವರ ದಾಸಿ ನಾನು. ಅವರು ನನ್ನ ನಿರ್ಗತಿಕ

ತಾಯಿಗೆ ಕೊಟ್ಟ ಬೆಲೆಯನ್ನು ನೀನು ಅವರಿಗೆ ಕೊಟ್ಟು ನನ್ನನ್ನು ಸೆರೆಯಿಂದ ಬಿಡಿಸಿಕೊಳ್ಳಲು ನಿನ್ನ ಕೈಲಾಗುವುದಾದರೆ ಬಿಡಿಸಿಕೋ. ಹೇಗಾದರೂ ಮಾಡಿ ಬಿಡಿಸಿಕೋ, ರಮೇಶ್. ನಿನ್ನನ್ನು ಬಿಟ್ಟು ನಾನು ಬದುಕಿರಲಾರೆ. ರಮೇಶ್, ರಮೇಶ್ (ಎಂದು ಮೊಗವೆತ್ತಿ, ಪ್ರೇಮಪೂರಿತ ದೃಷ್ಟಿಯಿಂದ ರಮೇಶನ ಮುಖ ನೋಡು ವಳು. ರಮೇಶ ಕಲ್ಲುಬೊಂಬೆಯಂತೆ ಸುಮ್ಮನೆ ನಿಂತಿರುವನು.) ರಮೇಶ್, ನಂಬಲಾರೆಯಾ, ನಂಬಲಾರೆಯಾ ? (ರಮೇಶ ಮೊದಲಿನಂತೆ ನಿಶ್ಚಲನಾಗಿ, ಮೌನವಾಗಿರುವನು.) ಆಗಲಿ, ನೀನು ನನ್ನನ್ನು ನಂಬದಿರಬಹುದು. ಆದರೆ ನಾನು ನಿನ್ನನ್ನು ನಂಬಿದ್ದೇನೆ. ನಿನ್ನಾಣೆ, ನೀನು ನನ್ನನ್ನು ನಂಬುವುದಿಲ್ಲವೆ ? (ರಮೇಶ ಇನ್ನೂ ಸುಮ್ಮನಿರುವನು.) ರಮೇಶ, ನಂಬಬೇಡ. ನನ್ನನ್ನು ನಂಬುವುದು ನಿನಗೆ ಇಷ್ಟವಿಲ್ಲ. (ಎಂದು ಪಕ್ಕದಲ್ಲಿ ಸ್ಟೂಲಿನ ಮೇಲೆ ಕಣ್ಣಿಗೆ ಬಿದ್ದ 'ಬಣ್ಣ ಕೆರೆಯುವ' ಚೂರಿಯನ್ನು ನೋಡಿ, ಕೈಗೆ ತೆಗೆದುಕೊಂಡು) ರಮೇಶ, ನಾನು ಚಂಚಲೆಯಿರಬಹುದು; ಆದರೆ ಧೀರೆ. ನಿನ್ನ ಪಾದಗಳ ಮೇಲೆ ಬಿದ್ದು ಸಾಯಲು ಸಿದ್ಧಳಾಗಿದ್ದೇನೆ. ಇದೋ — (ಎಂದು ಕೈಯನ್ನು ಮೇಲಕ್ಕೆತ್ತುವಳು. ರಮೇಶ ತತ್‌ಕ್ಷಣ ಅವಳ ಕೈಹಿಡಿದು ತಡೆಯುವನು.)

ರಮೇಶ:— ಸುಶೀಲೆ ! ಏನಿದು ! ಬೇಡ, ಬೇಡ....

ಸುಶೀಲೆ:— ಇಲ್ಲ. ನೀನು ನಂಬುವುದಿಲ್ಲ. ಬರಿದಾದ ಬಾಳು ನನಗೆ ಬೇಕಿಲ್ಲ.

ರಮೇಶ:— ಆಗಲಿ. ನೀನು ಹೇಳುವುದೆಲ್ಲ ನಂಬುತ್ತೇನೆ, ಹೇಳು. ನೀನು ನಿನ್ನ ಪತಿಯನ್ನು ಬಿಟ್ಟು ನನ್ನಲ್ಲಿಗೆ ಬರಬೇಕಾಗಿಲ್ಲ. ನೀನು ಹೇಳಬೇಕಾದ್ದನ್ನು ಬೇಗ ಹೇಳು, ಹೊತ್ತಾಯಿತು.

ಸುಶೀಲೆ:— ಎರಡು ಮಾತಿನಲ್ಲಿ ಹೇಳುತ್ತೇನೆ, ಕೇಳು ರಮೇಶ್: ನಾನು ಸೂ....ಳೆ....ಯ ಮಗಳು.

ರಮೇಶ:— ಏನೆಂದೆ ! ಏನೆಂದೆ ! ನಿಜವೆ ? (ಕ್ಷಣಹೊತ್ತು ಮೌನ) ಆದರೇನಂತೆ !

ಸುಶೀಲೆ:—ರಮೇಶ್: ಈಗ ನಾಲ್ಕು ವರ್ಷದ ಕೆಳಗೆ ಇದು ನಿನಗೆ
ಗೊತ್ತಾಗಿದ್ದರೆ ನೀನು ನನ್ನ ಕೈಹಿಡಿಯುತ್ತಿದ್ದೆಯೇನು? ಹೇಳು
(ರಮೇಶ ಸುಮ್ಮನಿರುವನು) ನನ್ನ ತಾಯಿ ಮದುವೆಯಾದ ಕೂಡಲೆ
ನಾನು ಹುಟ್ಟುವುದಕ್ಕೆ ಮುಂಚೆ, ಬಾಲವಿಧವೆಯಾದಳು
ಹೆರರ ಹಂಗಿನ ಕೂಳು ತಿನ್ನುತ್ತಿದ್ದಳು. ಅರೆಹೊಟ್ಟೆ, ಹರುಕ
ಬಟ್ಟೆ. ಆದರೂ ಚೆಲುವು ಮಾಸಿರಲಿಲ್ಲ. ಸುಖದ ಆಸೆ
ಹಿಂಗಿರಲಿಲ್ಲ. ಕೆಟ್ಟ ಹೆಸರನ್ನು ಹೊತ್ತಳು. ನೆಳಲು ಕೊಟ್ಟಿ
ದ್ದವರು ಮನೆ ಬಿಟ್ಟು ಹೊರಡಿಸಿದರು. ಹೊಟ್ಟೆಗೆ ಹಿಟ್ಟಿಲ್ಲ
ಮೈಗೆ ಬಟ್ಟೆಯಿಲ್ಲ. ಆ ಸ್ಥಿತಿಯಲ್ಲಿ ನಾನು ಹುಟ್ಟಿದ್ದು—
ತಂದೆಯೆನ್ನುವನಿದ್ದು ತಂದೆಯನ್ನು ಕಾಣದ ತಬ್ಬಲಿಯಾಗಿ
ಅವಳ ಕೊರಳಿಗೆ ನಾನೊಬ್ಬಳು ಗಂಟುಬಿದ್ದೆ. ಭಿಕ್ಷೆಯನ್ನಾ
ದರೂ ಮಾಡಬಹುದಾಗಿತ್ತು. ಆದರೆ ಅದೃಷ್ಟ ನನ್ನ ತಾಯನ್ನು
ಬೇರೆಯ ದಾರಿಗೆ ಎಳೆಯಿತು. ಕಾಲಕ್ರಮದಲ್ಲಿ ಸ್ವಲ್ಪ ಹಣ
ಕೂಡಿಟ್ಟಳು. ನನ್ನನ್ನು ಬೆಳಸಿಕೊಂಡು ಬಂದಳು. ಕೂಡೇ
ಅವಳಿಗೆ ನನ್ನ ಯೋಚನೆ ಹತ್ತಿತು. ತನ್ನ ದುರ್ಮಾರ್ಗವನ್ನು
ಬಿಟ್ಟು, ಮೊದಲಿದ್ದ ಊರನ್ನು ಬಿಟ್ಟು, ಈ ಊರಿಗೆ ಬಂದ
ನನ್ನನ್ನು ವಿದ್ಯಾವತಿಯನ್ನಾಗಿ ಮಾಡಿದಳು. ನನ್ನನ್ನು ವಿದ್ಯಾ
ವತಿಯನ್ನಾಗಿ ಮಾಡುವುದರಲ್ಲಿ ಅವಳ ಹಣವೆಲ್ಲ ಕರಗಿತು
ಮತ್ತೆ ಬಡತನ ಆವರಿಸಿತು. ಆ ವೇಳೆಗೆ ಗೋವಿಂದರಾಯರ
ಈ ಊರಿಗೆ ಬಂದು ಇಲ್ಲಿಯೇ ನೆಲಸಿದರು. ಆಗ ನೀನು ಊರ
ಬಿಟ್ಟು ಚಿತ್ರಕಲೆಯ ವ್ಯಾಸಂಗಕ್ಕೆಂದು ಕಲ್ಕತ್ತೆಗೆ ಹೋಗಿದ್ದೆ
ನನ್ನ ತಾಯಿ ಹಾಸಿಗೆ ಹಿಡಿದು ಮಲಗಿದಳು. ಹಣ ಬೇಕಾ
ಯಿತು. ಸಾವು ಸಂಕಟದಲ್ಲಿದ್ದ ನನ್ನ ತಾಯಿ ತನ್ನ ಹಿಂದಿ
ಗೋಳಿನ ಕತೆಯೆಲ್ಲವನ್ನೂ ಹೇಳಿಕೊಂಡಳು. ಗೋವಿಂ
ರಾಯರು ಬಂದಿದ್ದುದು ತಾಯಿಗೆ ಗೊತ್ತಿತ್ತು. ಅವರ ಬಳಿ
ನನ್ನನ್ನು ಹಣ ಕೇಳಲು ಕಳಿಸಿದಳು. ಗೋವಿಂದರಾಯರ
ಒಂದು ಷರತ್ತಿನ ಮೇಲೆ ಹಣ ಕೊಡಲು ಒಪ್ಪಿದರು: ಯತ

ಎಲ್ಲದೆ, ನಾನು ಒಪ್ಪಿ, ನಮ್ಮ ತಾಯಿಯ ಸಲುವಾಗಿ ಹಣ ಪಡೆದು ಅವರವಳಾದೆ. ಅಂದಿನಿಂದ ನಿನ್ನ ಆಸೆ ಬಿಟ್ಟೆ. ಗೋವಿಂದರಾಯರಿಗೆ ನನ್ನನ್ನು ನಾನು ಮಾರಿಕೊಂಡೆ.

ರಮೇಶ:—ನನಗೇಕೆ ಕಾಗದ ಬರೆಯಲಿಲ್ಲ? ನಿಮ್ಮ ತಾಯಿ ಇದಕ್ಕೆ ಒಪ್ಪಿದರೆ?

ಸುಶೀಲೆ:—ಒಪ್ಪಿದರು. ಒಪ್ಪಬೇಕಾಯಿತು. ಪಡೆದ ಹಣ ವ್ಯರ್ಥವಾಯಿತು. ನನ್ನ ತಾಯಿ ಬದುಕಲಿಲ್ಲ.

ರಮೇಶ:—ನಿನಗೆ ನೀನು ದ್ರೋಹಮಾಡಿಕೊಂಡಿರುತ್ತೀಯೆ. ನನ್ನ ನಿನ್ನ ಪರಸ್ಪರ ಅನುರಾಗದ ವಿಷಯ ನಿನ್ನ ತಾಯಿಗೆ ಗೊತ್ತಿರಲಿಲ್ಲವೆ?

ಸುಶೀಲೆ:—ಇಲ್ಲ. ಮರೆಮಾಚಿದ್ದೆ. ಅದಕ್ಕೇ ಒಂದು ದಿನವೂ ನಾನು ನಿನ್ನನ್ನು ನಮ್ಮ ಮನೆಯ ಕಡೆ ಬರಗೊಡದೆ ಇದ್ದದ್ದು. ನನ್ನ ತಾಯಿಗೆ ಆ ವಿಚಾರ ಗೊತ್ತಿದ್ದರೆ ಹೀಗೆ ಮಾಡಗೊಡುತ್ತಿರಲಿಲ್ಲ. ನನ್ನನ್ನು ನಿನ್ನ ಕೈಸೇರಿಸಿ ಹಾಯಾಗಿ ಪ್ರಾಣಬಿಡುತ್ತಿದ್ದಳು. ನಾನಾದರೂ ನಿನ್ನ ಕೈಹಿಡಿಯುವ ಯೋಚನೆ ಮಾಡಿರಲಿಲ್ಲ. ಒಮ್ಮೆ ಆ ಯೋಚನೆ ಬಂದಾಗ ಬೆದರಿದೆ: ಸತ್ಕುಲಪ್ರಸೂತನಾದ ನಿನ್ನನ್ನು ಹೇಗೆ ಕೆಡಿಸಲಿ ಎಂದು.

ರಮೇಶ:—ಸತ್ಕುಲ! ಸತ್ಕುಲ! ಸತ್ಕುಲ ಸುಟ್ಟುಹೋಗಲಿ. ಈಗಲಾದರೂ ನನ್ನ ಬಳಿಗೆ ಬಾ, ಬಾ ಸುಶೀಲೆ!

ಸುಶೀಲೆ:—ಆಗದು ರಮೇಶ, ಆಗದು. ಅಂದು ನಾನು ನಿಷ್ಕಳಂಕಳಾಗಿದ್ದೆ. ಇಂದು ಕಳಂಕಿನಿ; ಎಂಜಲು.

ರಮೇಶ:—ಸುಸೀ, ನಿನ್ನ ಹೊರಗು ಎಂಜಲಾದರೇನು, ನಿನ್ನ ಒಳಗು ಶುದ್ಧವಾಗಿದೆ. ನಿನ್ನ ದೇಹ ಎಂಜಲಿರಬಹುದು—ಆದರೆ ನಿನ್ನ ಒಲವು ನನಗೆ ವಿಾಸಲು—ಅಲ್ಲವೇ ಸುಸೀ?

ಸುಶೀಲೆ:—ಹೌದು, ಹೌದು. ನಾನು ಹೇಳಿದ್ದೆಲ್ಲವನ್ನೂ ನೀನು ನಂಬಿರುವುದಾದರೆ, ನೀನು ಹೇಳಿದ್ದನ್ನು ನಾನು ನಂಬಲೇನು?

ರಮೇಶ:—ನಂಬು, ನಂಬು. ನಂಬಿಕೆಗೆ ಏನು ಪ್ರಮಾಣ ಕೊಡಲಿ ಸುಶೀ. ಬಾ, ನನ್ನ ಬಳಿಗೆ ಬಾ ಸುಶೀ (ಎಂದು ಸುಶೀಲೆಯನ್ನು ಅಪ್ಪಿಕೊಂಡು ಅವಳ ಮುಂಗುರುಳು ತಿದ್ದುವನು. ಅಷ್ಟು ಹೊತ್ತಿಗೆ ಅಗುಣಿ ತೆಗೆಯುತ್ತಿರುವ ಸದ್ದು ಕೇಳಬರುವುದು.) ಸುಶೀಲೆ, ನೀನು ಬೆಲೆವೆಣ್ಣು ಅಲ್ಲವೆ?

ಸುಶೀಲೆ:—ಹೌದು.

ರಮೇಶ:—ಬೆಲೆ ಕೊಟ್ಟು ನಿನ್ನನ್ನು ನಾನಿಂದು ಪಡೆಯುತ್ತೇನೆ. ನಿನ್ನ ತಾಯಿಗೆ ಗೋವಿಂದರಾಯ ಕೊಟ್ಟ ಹಣ ಎಷ್ಟು?

ಸುಶೀಲೆ:—ಐನೂರು ರೂಪಾಯಿ.

ಸುಶೀಲೆ:—ಐನೂರು ರೂಪಾಯಿ. ಛಿ! ನಿನ್ನ ಬೆಲೆ ಐನೂರು ರೂಪಾಯಿ ಮಾತ್ರವೇ!

[ಈ ಹೊತ್ತಿಗೆ ಗೋವಿಂದರಾಯನು ಪ್ರವೇಶಿಸುವನು.]

ಐನೂರು ರೂಪಾಯಿ ಮಾತ್ರವೇ! ಹ ಹ್ಹ ಹ!

ಗೋವಿಂದ:—ರಮೇಶರೇ, ಚಿತ್ರ ಪೂರೈಸಿತೋ. ನನ್ನ ಮನಸ್ಸು ಒಪ್ಪಿದರೆ ಐನೂರಲ್ಲದಿದ್ದರೆ ಸಾವಿರ ಕೊಡುತ್ತೇನೆ. ಎರಡು ಸಾವಿರ ಕೊಡುತ್ತೇನೆ. ನಿಮ್ಮನ್ನು ಸೀಮೆಗೆ ಕಳಿಸಿಕೊಡುವ ಭಾರ ವಹಿಸುತ್ತೇನೆ, ಸರಿಯೆ. ಎಲ್ಲಿ, ಚಿತ್ರ ನೋಡೋಣ. (ಎಂದು ಚಿತ್ರದ ಬಳಿಗೆ ಹೋಗಿ ನೋಡುವನು.) ಇದೇನು? ನಾನು ಬಂದಾಗ ಹೇಗಿತ್ತೋ ಹಾಗೆಯೇ ಇರುವಂತಿದೆ. ಕೈ ಆಡಿಸಿರುವ ಹಾಗೆ ಕಾಣುವುದಿಲ್ಲ. ರಮೇಶ್, ಸುಶೀಲೆ ನಿಮಗೆ ಬಹಳ ತೊಂದರೆ ಕೊಡುತ್ತಿದ್ದಾಳೆ. ಇವೊತ್ತು ಬಂದ ಘಳಿಗೆ ಚೆನ್ನಾಗಿಲ್ಲ ಅಂತ ತೋರುತ್ತೆ. ನಾಳೆ ಬೇಕಾದರೆ ಮತ್ತೆ ಬರುತ್ತೇವೆ. ನಮಗೆ ಅಪ್ಪಣೆಯೆ? (ರಮೇಶ ಸುಮ್ಮನಿರುವನು. ಸುಶೀಲೆ ಗೋಡೆಯ ಮೇಲಿನ ಚಿತ್ರಗಳ ಬಳಿ ನಿಂತಿರುವಳು.—ಸುಶೀಲೆಯ ಕಡೆ ತಿರುಗಿ) ಸುಶೀಲೆ! (ಎಂದು ಸುಶೀಲೆಯ ಕಡೆ ತಿರುಗಿದಾಗ ಅವನ ದೃಷ್ಟಿ ತೆರೆ ತೆಗೆದಿದ್ದ ಚಿತ್ರಗಳ ಕಡೆಗೆ ಹೋಗುವುದು) ಸುಶೀಲೆ! (ಸುಶೀಲೆ ಸುಮ್ಮನಿರುವಳು.) ಸುಶೀಲೆ! ನೋಡಿದೆಯಾ ಅಲ್ಲಿ ನಿನ್ನ ಚಿತ್ರಗಳನ್ನು. ಆಹಾ, ರಮೇಶರೆ! ನನಗೆ ಗೊತ್ತಿಲ್ಲದಂತೆ ಈ ಚಿತ್ರ

ಗಳನ್ನು ಯಾವಾಗ ಬರೆದಿರಿ? ಬಹಳ ಸೊಗಸಾಗಿವೆ. ರಮೇಶ್ ನಿಮ್ಮ ಪ್ರತಿಭೆ ಆ ಚಿತ್ರಗಳಲ್ಲಿ ಅದ್ಭುತವಾಗಿ ಕಂಗೊಳಿಸುತ್ತಿದೆ ನೋಡು ಸುಶೀಲೆ! ನಿನ್ನ ಚಿತ್ರಗಳನ್ನು ನೀನು ನೋಡಿ ಹಿಗ್ಗ ರಮೇಶ್, ಈ ಚಿತ್ರ ನಿಧಾನವಾಗಿ ಮುಗಿಯಲಿ. ಆತುರವಿಲ್ಲ ಸದ್ಯಕ್ಕೆ ಅವುಗಳನ್ನು ಕೊಟ್ಟುಬಿಡಿ. ನೀವು ಕೇಳಿದಷ್ಟು ಬೆಲೆ ಕೊಡುತ್ತೇನೆ. ಪರದೇಶದ ಚಿತ್ರಪ್ರದರ್ಶನಗಳಿಗೆ ಕಳಿ ನಿಮಗೆ ಕೀರ್ತಿ ತರುತ್ತೇನೆ. ಇದೋ ಮಾತು ಕೊಟ್ಟಿದ್ದೇನೆ ನೀವು ಕೇಳಿದ್ದು ಕೊಡುತ್ತೇನೆ. ಏನು ಹೇಳಿ ರಮೇಶ್.

ರಮೇಶ:—(ಸ್ವಲ್ಪ ಹೊತ್ತು ಸುಮ್ಮನಿದ್ದು) ಅವುಗಳನ್ನು ನಾನು ಕೀರ್ತಿ ಗಾಗಿ ಬರೆಯಲಿಲ್ಲ. ಪ್ರದರ್ಶನಗಳಿಗೆ ಕಳಿಸಲು ಬರೆಯಲಿಲ್ಲ ಮಾರುವುದಕ್ಕಾಗಿಯೂ ಬರೆಯಲಿಲ್ಲ. ಆತ್ಮಸಂತೋಷಕ್ಕಾಗಿ ಬರೆದವು ಅವು; ನನ್ನ ಜೀವನದ ಆಕಾಂಕ್ಷೆಯನ್ನು ತುಂಬಿಕೊಳ್ಳಲು ಬರೆದವು. ನಿಮಗಾಗಿ ಬರೆದವುಗಳಲ್ಲ.

ಗೋವಿಂದ:—ರಮೇಶ್, ನೀವು ಚಿತ್ರಗಾರರಾಗಿರುವಿರಲ್ಲದೆ ಮಾತು ಗಾರರೂ ಆಗಿರುತ್ತೀರಿ. ನೀವು ಹೇಳುವುದು ನನಗೆ ಅರ್ಥ ವಾಗುವುದಿಲ್ಲ.

ರಮೇಶ:—ನಿಮಗೆ ಅರ್ಥವಾಗುತ್ತದೆ; ಚಿತ್ರಗಳನ್ನು ಪರಿಶೀಲಿ ನೋಡಿ.

ಗೋವಿಂದ:—ನೋಡಿದೆ. ಚೆನ್ನಾಗಿ ನೋಡಿದ್ದೇನೆ. ಚಿತ್ರಗಳು ಬಲು ಚೆನ್ನಾಗಿವೆ.

ರಮೇಶ:—ಈ ಚಿತ್ರವನ್ನೂ ಆ ಚಿತ್ರಗಳನ್ನೂ ಹೋಲಿಸಿ ನೋಡಿ ದಯಮಾಡಿ ನೋಡಿ.

ಗೋವಿಂದ:—(ತೂಗಿ ತೂಗಿ ನೋಡಿ) ಹೋಲಿಸಿದೆ. ಇದಕ್ಕಿಂತ ಅವು ಚೆನ್ನು.

ರಮೇಶ:—ವ್ಯತ್ಯಾಸಗಳು ಏನೂ ಕಾಣುವುದಿಲ್ಲವೆ?

ಗೋವಿಂದ:—ಅಲ್ಪಸ್ವಲ್ಪ ವ್ಯತ್ಯಾಸಗಳಿವೆ. ಬಣ್ಣಗಳಲ್ಲಿ ವ್ಯತ್ಯಾಸವಿದ ಸುಶೀಲೆಯ ಮುಖ ಅಲ್ಲಿ ಇನ್ನೂ ಎಳಸಾಗಿದೆ; ಈ ಚಿತ್ರದ

ಇರುವುದಕ್ಕಿಂತ ಹೆಚ್ಚು ಗೆಲವಾಗಿದೆ. ಆ ಚಿತ್ರಗಳನ್ನು ನಿಮಗೆ ಕೊಡಲಾಗದಿದ್ದರೆ ಈ ಚಿತ್ರವನ್ನೇ ಹಾಗೆ ಮಾಡಿ ಕೊಡಿ.

ರಮೇಶ:—ಅದು ಸಾಧ್ಯವಿಲ್ಲ.

ಗೋವಿಂದ:—ಹಾಗಾದರೆ ಆ ಚಿತ್ರಗಳನ್ನೇ ಕೊಡಿ. ಕೊಟ್ಟುಬಿಡಿ ರಮೇಶಾ. ನೀವು ಕೇಳಿದ್ದನ್ನು ಕೊಡುತ್ತೇನೆ. ದೇವರು ನನಗೆ ಆ ಶಕ್ತಿ ಕೊಟ್ಟಿದ್ದಾನೆ.

ರಮೇಶ:—ಸಂತೋಷ. ಆದರೆ ಆ ಚಿತ್ರಗಳನ್ನು ಬಿಟ್ಟು ನಾನು ಇರಲಾರೆ.

ಗೋವಿಂದ:—ಆದರೆ – ಒಂದು ವಿಷಯ ರಮೇಶ್: ನಾನು ಒಂದು ಚಿತ್ರ ಬರೆಯಲು ಹೇಳಿರುವಲ್ಲಿ ನೀವು ಕಳ್ಳತನದಿಂದ ನನ್ನ ಮಡದಿಯ ೩ ಮೂರು ಚಿತ್ರಗಳನ್ನು ಬರೆದು, ಅವನ್ನು ಕೊಡುವುದಿಲ್ಲವೆಂದು ಹೇಳುವುದು ನ್ಯಾಯವಲ್ಲ.

ರಮೇಶ:—ಹ ಹ್ಹ ಹ! ಕಳ್ಳತನದಿಂದ ಬರೆದೆನೆ! ನೀವು ನನ್ನನ್ನು ನೋಡುವುದಕ್ಕೆ ಬಂದ ದಿನವೇ, ಆ ಚಿತ್ರಗಳು ಯಾರವು, ತೋರಿಸಿ — ಎಂದು ನೀವು ಕೇಳಲಿಲ್ಲವೆ?

ಗೋವಿಂದ:— ಅಂದರೆ – ಅಂದರೆ – ಈ ಚಿತ್ರಗಳು ಆಗಲೇ ಸಿದ್ಧವಾಗಿದ್ದುವೆ?

ರಮೇಶ:—ಹೌದು.

ಗೋವಿಂದ:—ನೀವು ಚಿತ್ರಗಾರರು ಮಾತ್ರವಲ್ಲ, ಮಾತುಗಾರರು ಮಾತ್ರವಲ್ಲ, ಮಂತ್ರಗಾರರೂ ಆಗಿರುವಿರಿ. ನೀವು ಯಾವಾಗ ಬರೆದಿರೋ ಏನೋ, ಅದು ಏನಾದರೂ ಇರಲಿ. ನನ್ನ ಮಡದಿಯ ಚಿತ್ರಗಳನ್ನು ನನ್ನ ಅಪ್ಪಣೆಯಿಲ್ಲದೆ ನೀವು ಇಟ್ಟುಕೊಳ್ಳಕೂಡದು. ಅವು ನನಗೆ ಸೇರತಕ್ಕವು. ನಿಮ್ಮ ಶ್ರಮಕ್ಕೆ ತಕ್ಕ ಪ್ರತಿಫಲ ತೆಗೆದುಕೊಳ್ಳಿ. ಕೊಡಲು ಸಿದ್ಧನಿದ್ದೇನೆ.

ರಮೇಶ:—ರಾಯರೆ, ಹೆಚ್ಚು ಮಾತಿನಿಂದ ಪ್ರಯೋಜನವಿಲ್ಲ. ನಿಮ್ಮ ಹಣ ನಿಮ್ಮ ಬಳಿ ಇರಲಿ. ಆ ಚಿತ್ರಗಳ ಗೊಡವೆ ನಿಮಗೆ ಏಕೆ? ನೋಡಿ ಆನಂದಪಡಿ ಎಂದು ತೋರಿಸಿದೆ, ಅಷ್ಟೆ. ಅವು ನನ್ನ ನಲ್ಲೆಯ ಚಿತ್ರಗಳು.

ಗೋವಿಂದ:—ನಲ್ಲೆ!

ರಮೇಶ:—ಹೌದು, ನನ್ನ ನಲ್ಲೆ, ನನ್ನ ಇನಿಯಳು; ನನ್ನ ಪ್ರೀತಿಗೆ, ನನ್ನ ಪೂಜೆಗೆ, ಪಾತ್ರಳಾದವಳು. ನನ್ನ ಕೈಜಾರಿ ಹೋದವಳು. ನನ್ನ ನಲ್ಲೆ.

ಗೋವಿಂದ:—ರಮೇಶ್, ಹಾಗಾದರೆ ಕ್ಷಮಿಸಬೇಕು. ಆದರೂ—ಸುಶೀಲೆಯ ಚಿತ್ರಗಳ ಹಾಗೆಯೇ ಕಾಣುತ್ತವೆ. ಸುಶೀಲೆ, ನೋಡು, ಅವು ನಿನ್ನ ಚಿತ್ರಗಳಂತೆಯೇ ಇಲ್ಲವೆ?

ಸುಶೀಲೆ:—ಹಾಗೆಯೇ ಇವೆ. ಆದರೆ ನನ್ನನ್ನು ನೋಡಿಕೊಂಡು ಬರೆದಿಲ್ಲವೆಂದು ನಾನು ಹೇಳಬಲ್ಲೆ. ಅವು ಒಂದು ವೇಳೆ ನನ್ನ ಚಿತ್ರಗಳೇ ಆಗಿದ್ದರೂ ರಮೇಶರು ಅವನ್ನು ಬರಿಯ ನೆನಪಿನಿಂದ ಮಾತ್ರ ಚಿತ್ರಿಸಿರಬೇಕು.

ಗೋವಿಂದ:—ರಮೇಶ್, ಇವು ನನ್ನ ಹೆಂಡತಿಯ ಚಿತ್ರಗಳು ಅಲ್ಲ ಎಂದು ನೀವು ಹೇಳುತ್ತೀರಿ. ಒಂದು ವೇಳೆ ಆಗಿದ್ದರೆ, ಹದಿನೈದು ದಿನಗಳಲ್ಲಿ ಬರಿಯ ನೆನಪಿನಿಂದ ಇಂಥ ಅದ್ಭುತವಾದ ಭಾವಚಿತ್ರಗಳನ್ನು ಚಿತ್ರಿಸಿರುವುದು ನಿಮ್ಮ ಸಾಮರ್ಥ್ಯವನ್ನು ತೋರಿಸುತ್ತದೆ. ನಿಮ್ಮ ನಿಪುಣತೆಗೆ ಮೆಚ್ಚಿ, ನಾನು ಮೊದಲೇ ಹೇಳಿದಂತೆ, ನೀವು ಕೇಳಿದಷ್ಟು ಹಣ ಕೊಟ್ಟು ಅವುಗಳನ್ನು ಕೊಂಡುಕೊಳ್ಳಲು ಸಿದ್ಧನಾಗಿದ್ದೇನೆ. ಆದರೆ, ನೀವು ಹೇಳುವಂತೆ, ಅವು ನಿಮ್ಮ ನಲ್ಲೆಯ ಚಿತ್ರಗಳೇ ಆಗಿರುವ ಭಾಗದಲ್ಲಿ, ಆ ಚಿತ್ರಗಳ ನಿಮ್ಮ ನಲ್ಲೆ ಸುಶೀಲೆಯ ತದ್ವತ್ತಾಗಿರುವುದು ನನಗೆ ಬಹಳ ಆಶ್ಚರ್ಯವಾಗಿದೆ.

ರಮೇಶ:—ನನ್ನ ನಲ್ಲೆಯ ಚಿತ್ರಗಳನ್ನು ನೀವು ನಿಮ್ಮ ಮಡದಿಯ ಚಿತ್ರಗಳೆಂದು ಭ್ರಾಂತಿಗೊಂಡಿರಿ, ಅಷ್ಟೆ. ನನ್ನ ನಲ್ಲೆಯ ಚಿತ್ರಗಳನ್ನು ನಿಮಗೆ ಕೊಡಬಹುದೆ, ನೀವೇ ಹೇಳಿ?

ಗೋವಿಂದ:—( ತಲೆ ಕೆರೆಯುತ್ತ ) ಸರಿಯೇ. ಆದರೆ — ಹುಂ — .... ಈ ಚಿತ್ರವನ್ನು ನಾಳೆ ಕೊಡುತ್ತೀರೋ?

ರಮೇಶ:—ಇಲ್ಲ. ಇವೊತ್ತೇ ತೆಗೆದುಕೊಂಡು ಹೋಗಬಹುದು.

ಗೋವಿಂದ:—ಆದರೆ – ಚಿತ್ರವನ್ನು ಇನ್ನೂ ಉತ್ತಮಗೊಳಿಸುತ್ತೇನೆ ಎಂದು ಹೇಳಿದ್ದರಲ್ಲ?

ರಮೇಶ:—ಅದು ಸಾಧ್ಯವಿಲ್ಲ. ನಿಮ್ಮ ಮಡದಿ ಹೇಗೆ ಇದ್ದಾರೆಯೋ ಹಾಗೆ ಆಕೆಯನ್ನು ನಾನು ಚಿತ್ರಿಸಿರುತ್ತೇನೆ. ಚಿತ್ರಕಲಾವಿದರು ಇದರಲ್ಲಿ ದೋಷಗಳನ್ನು ತೋರಿಸಿಕೊಟ್ಟ ಕೂಡಲೆ ನೀವು ಕೊಟ್ಟ ಮೊಬಲಗನ್ನು ನಿಮಗೆ ಹಿಂದಿರುಗಿಸುತ್ತೇನೆ.

ಗೋವಿಂದ:—ಹೋಗಲಿ ಬಿಡಿ. ನನಗೂ ಹೊತ್ತಾಯಿತು. ಕಾಡು ಹರಟೆಯಿಂದ ಏನು ಪ್ರಯೋಜನ. ತೆಗೆದುಕೊಳ್ಳಿ — ೫೦೦ ರೂಪಾಯಿ. ( ಎಂದು ಜೇಬಿಗೆ ಕೈಹಾಕಿ ಹಣದ ಚೀಲ ತೆಗೆದು ) ಇನ್ನೂ ಕೊಡುತ್ತಿದ್ದೆ — ಆದರೆ .... ( ೫ ನೋಟುಗಳನ್ನು ಎಣಿಸಿ ಕೊಡುವನು. ರಮೇಶ ಅವನ್ನು ತೆಗೆದುಕೊಳ್ಳುವನು. ) ಇನ್ನು ಚಿತ್ರ ಕೊಡುತ್ತೀರ, ಹೋಗುತ್ತೇವೆ?

ರಮೇಶ:—ಶಿವಶಂಕರ್, ಶಿವಶಂಕರ್ ( ಶಿವಶಂಕರ ಬರುತ್ತಾನೆ ) ಈ ಚಿತ್ರವನ್ನು ಪ್ಯಾಕ್ ಮಾಡಿಕೊಂಡು ಬಂದು ಇವರಿಗೆ ಕೊಡು. ( ಶಿವಶಂಕರ ಚಿತ್ರ ತೆಗೆದುಕೊಂಡು ಹೋಗುತ್ತಾನೆ. )

[ ಗೋವಿಂದರಾಯ ಸುಮ್ಮನೆ ಎವೆಯಿಕ್ಕದೆ ಆ ಚಿತ್ರಗಳನ್ನು ನೋಡುತ್ತ ನಿಂತಿರುತ್ತಾನೆ ರಮೇಶ ಸುಶೀಲೆಯರು ಒಬ್ಬರನ್ನೊಬ್ಬರು ನೋಡುತ್ತ ನಿಂತಿರುತ್ತಾರೆ. ]

ಗೋವಿಂದ:—ರಮೇಶ್.

ರಮೇಶ:—ಏನು ರಾಯರೆ?

ಗೋವಿಂದ:—ಈ ಚಿತ್ರಗಳನ್ನು ನೋಡಿನೋಡಿದಂತೆ ಅವು ಸುಶೀಲೆ ಯವೇ ಎಂದು ನನಗೆ ದೃಢವಾಗುತ್ತಿದೆ. ಒಬ್ಬರೊಬ್ಬರಿಗೆ ಇಷ್ಟೊಂದು ಸಾಮ್ಯವಿರುತ್ತದೆಯೇ ಪ್ರಪಂಚದಲ್ಲಿ?

ರಮೇಶ:—ಇಲ್ಲ.

ಗೋವಿಂದ:—ಅದೇ ನಾನು ಹೇಳುವುದು. ಹೋಗಲಿ, ತಾವು ಅನ್ಯಥಾ ಭಾವಿಸಿಕೊಳ್ಳದಿದ್ದರೆ, ಈ ಚಿತ್ರಗಳ ಆಕೆ ಯಾರು ಎಂದು ಕೇಳಬಹುದೆ?

[ಅಷ್ಟು ಹೊತ್ತಿಗೆ ಶಿವಶಂಕರ ಪ್ಯಾಕ್‌ಮಾಡಿದ ಚಿತ್ರವನ್ನು ತಂದು ರಮೇಶನ ಕೈಗೆ ಕೊಡುವನು.]

ರಮೇಶ:—ಶಿವಶಂಕರ್, ನೀನು ಕೊಟಡಿಯಲ್ಲೇ ಇರು. ಕೂಗಿದಾಗ ಬಾ, ಗೊತ್ತಾಯಿತೆ?

ಶಿವ:—ಆಗಲಿ ಸಾರ್ (ಎಂದು ತೆರಳುವನು.)

ರಮೇಶ:—ರಾಯರೆ, ಆಕೆಯನ್ನು ತಾವು ನೋಡಿದ್ದೀರಿ. ಇರಲಿ. ಚಿತ್ರ ತೆಗೆದುಕೊಳ್ಳಿ. (ಚಿತ್ರ ತೆಗೆದು ನೀಡುವನು. ಗೋವಿಂದರಾಯ ತೆಗೆದುಕೊಳ್ಳುವನು.) ನಮ್ಮ ವ್ಯವಹಾರ ಇಲ್ಲಿಗೆ ತೀರಿತು ತಾನೆ?

ಗೋವಿಂದ:—ಆಹಾ. ಹೋಗಿ ಬರಲೆ?

ರಮೇಶ:—ಸ್ವಲ್ಪ ತಡೆಯಿರಿ ರಾಯರೆ, ಅಷ್ಟು ಆತುರ ಯಾಕೆ. ನೀವು ಕೊಟ್ಟ ನನ್ನ ಈ ೫೦೦ ರೂಪಾಯಿ ತೆಗೆದುಕೊಳ್ಳಿ.

ಗೋವಿಂದ:—ಯಾಕೆ? ನೋಟುಗಳು ಏನಾಗಿವೆ? ಬೇರೆ ಕೊಡಲೇನು?

ರಮೇಶ:—ಇಲ್ಲ. ಸರಿಯಾಗಿವೆ. ಆದರೂ, ಹಿಡಿಯಿರಿ.

ಗೋವಿಂದ:—ಇದೇನು!

ರಮೇಶ:—ನೀವು ಹಿಡಿಯಬಾರದೆ? ತೆಗೆದುಕೊಳ್ಳಿ, ಆ ಮೇಲೆ ಹೇಳುತ್ತೇನೆ.

ಗೋವಿಂದ:—(ಬಹಳ ಅನುಮಾನಿಸಿ, ಆ ಮೇಲೆ ತೆಗೆದುಕೊಂಡು) ಏನು ಹೇಳಿ.

ರಮೇಶ:—ಯಾವ ಹೆಣ್ಣನ್ನು ನೀವು ಬೆಲೆ ಕೊಟ್ಟು ಕೊಂಡು ಕೊಂಡಿರೋ ಆ ಬೆಲೆ ಇದು. ಚಿತ್ರ ಆ ಹಣದ ಮೇಲಿನ ಬಡ್ಡಿ. ಸುಶೀಲೆಯನ್ನು ಬೆಲೆ ಕೊಟ್ಟು ನಾನು ಹಿಂದಕ್ಕೆ ಕೊಂಡಿರು

ತ್ತೇನೆ. ಚಿತ್ರವನ್ನೂ ಹಣವನ್ನೂ ತೆಗೆದುಕೊಂಡು ತ
ದಯಮಾಡಬಹುದು ಇನ್ನು. ಈಗ ಆ ಚಿತ್ರಗಳ ಮೂ
ಯಾರೆನ್ನುವುದು ತಮಗೆ ಗೊತ್ತಾಗಿರಬಹುದು. ಅವು
ನಲ್ಲಿಯ ಚಿತ್ರಗಳು, ಸುಶೀಲೆಯ ಚಿತ್ರಗಳು. ನಿ
ಮಡದಿಯ ಚಿತ್ರ ಈಗ ನಿಮ್ಮ ಬಳಿಯೇ ಇದೆ. ಆದರೆ ನಿ
ಮಡದಿ ಮಾಯವಾದಳಿನ್ನು. ನನ್ನ ನಲ್ಲೆ ಇಲ್ಲಿರುವ
ದಯವಿಟ್ಟು ಕೋಪಮಾಡದೆ ಸಮಾಧಾನಚಿತ್ತದಿಂದ ತೆ
ತಾವೂ ಸುಖವಾಗಿದ್ದು, ನಮ್ಮನ್ನೂ ಸುಖವಾಗಿರಲು ಬಿಡಿ.

ಗೋವಿಂದ:—ಚಿತ್ರಗಾರನಂತೆ ಚಿತ್ರಗಾರ! ಮಾತುಗಾರ. ಮ
ಗಾರ, ತಂತ್ರಗಾರ, ಮೋಸಗಾರ. ನಿನ್ನ ನಲ್ಲೆ, ನಿನ್ನ ಸ
ಏನೆಂದೆ? ನಿನ್ನ ಮೈಮೇಲೆ ಪ್ರಜ್ಞೆ ಇದೆಯೋ ಇಲ್ಲವೋ
ಏನೋ ಎಂದುಕೊಂಡಿದ್ದೆ. ನಿನ್ನನ್ನು ದೊಡ್ಡ ವ್ಯಕ್ತಿ ಎಂ
ತಪ್ಪೆಣಿಸಿದೆ. ನಡಿ, ಸುಶೀಲೆ, ನಡಿ (ಎಂದು ಹೊರಡಲುದ್ಯುಕ್ತನಾ
ಹನು. ಸುಶೀಲೆ ನಿಂತಲ್ಲಿ ನಿಂತಿರುವಳು.) ನಡಿ ಸುಶೀಲೆ; ಏ
ನೋಡುತ್ತ ನಿಂತೆ (ಎಂದು ಅವಳ ಒಂದು ಕೈ ಹಿಡಿದು ಮು
ನಡೆಯುವನು.)

ರಮೇಶ:—ಸುಶೀಲೆ – ಹೋದರೆ ನನ್ನಾಣೆ. ನಿಲ್ಲು (ಎಂದು ಸುಶೀ
ಮತ್ತೊಂದು ಕೈ ಹಿಡಿಯುವನು. ಸುಶೀಲೆ ನಿಲ್ಲುವಳು.)

ಗೋವಿಂದ:—(ಹಿಂದಿರುಗಿ) ನೀಚ! ನನ್ನ ಹೆಂಡತಿಯನ್ನು ಕೈಹಿಡಿ
ನಿಲ್ಲಿಸುವಷ್ಟು ಕೆಚ್ಚೆದೆಯೋ ನಿನಗೆ! (ಎಂದು ಸುಶೀಲೆಯ ಕೈ ಬಿ
ಚಿತ್ರವನ್ನು ಒಕ್ಕಡೆಗೆ ಬಿಸುಟು, ರಮೇಶನ ಕೆನ್ನೆಗೆ ಬಲವಾಗಿ ಒಂದೆ
ಹೊಡೆಯುವನು. ರಮೇಶ ಕೆಡೆದು ಬೀಳುವನು.)

ಸುಶೀಲೆ:—ಅಯ್ಯೋ, ರಮೇಶ ರಮೇಶಾ! (ಎಂದು ಚೀರುತ್ತ ರಮೆ
ಮೇಲೆ ಬಿದ್ದು, ಅವನನ್ನು ತಬ್ಬಿಕೊಂಡು ಬಿಕ್ಕಿಬಿಕ್ಕಿ ಅಳುವಳು. ಗದ್ದಲ
ಶಿವಶಂಕರ ಕೋಣೆಯಿಂದ ಓಡಿ ಬಂದು ಒಂದು ಕಡೆ ಬೆರಗಾಗಿ ನಿಂತಿರುವನ

ಗೋವಿಂದ:—ಸುಶೀಲೆ, ಇದು ನಿಜವೇ? (ಎಂದು ಗೋಡೆಯ ಮೇಲಿನ
ಗಳನ್ನು ಒಮ್ಮೆ, ಸುಶೀಲೆಯನ್ನು ಒಮ್ಮೆ—ಹೀಗೆ ಕ್ಷಣಹೊತ್ತು ನೋಡು
ಹನು. ಶಿವಶಂಕರನೂ ಸಹ ಆಶ್ಚರ್ಯದಿಂದ ಆ ಚಿತ್ರಗಳನ್ನು ಮೊದಲನೆಯ

ನೋಡುವನು. ತುಸ ಹೊತ್ತಾದ ಮೇಲೆ) ಮಗೂ, ಒಂದು ಲೋಟ ನೀರು ತೆಗೆದುಕೊಂಡು ಬಾ. (ಶಿವಶಂಕರ ತೆರಳುವನು. ಗೋವಿಂದ ರಾಯ ಸುಶೀಲೆಯ ಬಳಿ ಕುಳಿತು) ಸುಶೀಲೆ, ನೀನು ಒಪ್ಪಿ ನನ್ನ ಬಳಿಗೆ ಬರಲಿಲ್ಲವೆ? ಹೋಗಲಿ, ನನ್ನಲ್ಲಿ ಮರೆಮಾಚಿದ್ದೇಕೆ?

ಸುಶೀಲೆ:— ಇನ್ನೇನು ಮಾಡುವುದಕ್ಕೂ ನನಗೆ ತೋರಲಿಲ್ಲ. ಮತ್ತೆ ರಮೇಶನನ್ನು ಕಂಡಾಗ ನಿಮ್ಮ ಸಹವಾಸ ಅನಿಷ್ಟವಾಯಿತು. ಹೇಗಾದರೂ ಮಾಡಿ ನನ್ನನ್ನು ಕರೆದುಕೋ ಎಂದೆ. ಉದಾರ ಮನಸ್ಸಿನಿಂದ ಒಪ್ಪಿ, ನನಗಾಗಿ ನಿಮ್ಮ ಕೂಡ ಹೆಣಗಾಡಿದ. ನಿಮ್ಮ ಸಹವಾಸದಲ್ಲಿದ್ದ ನನ್ನನ್ನು ಅವನು ಸ್ವೀಕರಿಸಲು ಒಪ್ಪ ಬೇಕಾದರೆ ಎಷ್ಟು ಔದಾರ್ಯ ಬೇಕು, ಎಷ್ಟು ಕೆಚ್ಚು ಬೇಕು! ಈಗ ನೀವು ದೊಡ್ಡಮನಸ್ಸು ಮಾಡಬೇಕು, ಔದಾರ್ಯ ತೋರ ಬೇಕು.

[ಶಿವಶಂಕರ ನೀರು ತಂದು ಇಡುವನು; ದೂರಗಾಗಿ ಒಂದು ಕಡೆ ನಿಂತಿರುವನು. ಸುಶೀಲೆ ತನ್ನ ಕರವಸ್ತ್ರವನ್ನು ಒದ್ದೆಮಾಡಿ ರಮೇಶನ ಹಣೆ ಕಣ್ಣುಗಳನ್ನು ಒತ್ತುತ್ತಿರುವಳು.]

ಗೋವಿಂದ:— ಸುಶೀಲೆ— ನಾನು ನಿನ್ನ ದೇಹವನ್ನು ಮಾತ್ರ ಪಡೆದಿದ್ದೆ. ನಿನ್ನ ಒಲವು ನನ್ನ ಪಾಲಿಗಿರಲಿಲ್ಲ. ಒಲಿದಂತೆ ನೀನು ನಟಿಸಿ ನನ್ನನ್ನು ಮೋಸಮಾಡಿದೆ.

ಸುಶೀಲೆ:— ತಾವು ಹಾಗೆ ತಿಳಿಯಬೇಡಿ. ನಾನು ಎಂದಿಗೂ ಮೋಸ ಮಾಡಲಿಲ್ಲ. ಸಮಯಕ್ಕೆ ನೀವು ಮಾಡಿದ ಉಪಕಾರಕ್ಕೆ, ನಿಮ್ಮನ್ನು ಸಂತೋಷಪಡಿಸಲೋಸುಗ, ನಾನು ನಿಮಗೆ ಸಲ್ಲಿಸಿದ ಅಲ್ಪವಾದ ಕಾಣಿಕೆ — ನನ್ನ ನಟನೆ. .... ಇನ್ನು ದಯ ಮಾಡಿ. ಕೋಪ ಬಿಡಿ. ಕಾಲಿಗೆ ಬೀಳುತ್ತೇನೆ. (ಎಂದು ಅವನ ಕಾಲು ಹಿಡಿದುಕೊಂಡು) ನನ್ನನ್ನು ರಮೇಶನಿಗೆ ಒಪ್ಪಿಸಿಬಿಡಿ. ದೊಡ್ಡಮನಸ್ಸು ಮಾಡಿ. ಹಟ ಹಿಡಿದು ಕರೆದುಕೊಂಡು

ಹೋದರೆ, ನನ್ನ ಹೆಣವನ್ನು ನೀವು ಒಪ್ಪವಮಾಡಬೇಕಾಗುತ್ತದೆ, ಅಷ್ಟೆ. ರಮೇಶನನ್ನು ಒಂದು ಘಳಿಗೆಯೂ ಬಿಟ್ಟಿರಲಾರೆ ಇನ್ನು. ನಿಮ್ಮ ಮನಸ್ಸು ಉದಾರವೆಂದು ನಾನು ಬಲ್ಲೆ. ದಯವಿಟ್ಟು ಔದಾರ್ಯ ತೋರಿ.

ಗೋವಿಂದ:—ಚಿಂತೆಯಿಲ್ಲ, ಸುಶೀಲೆ. ನಿನ್ನನ್ನು ಬಿಟ್ಟುಹೋಗುವುದು ಔದಾರ್ಯವೇನೂ ಅಲ್ಲ. ನೀನು ಕೇಳಿಕೊಳ್ಳದಿದ್ದರೂ ನಿನ್ನನ್ನು ಬಿಟ್ಟುಹೋಗುತ್ತಿದ್ದೆ. ನಿನ್ನ ಒಲವು ಬೇರೆಯ ಕಡೆ ಇರುವಾಗ ನಿನ್ನಿಂದ ನನಗೆಲ್ಲಿಯ ಸುಖ? ರಮೇಶನೊಡನೆ ಸುಖವಾಗಿ ಬಾಳು. ಆದರೂ ನಿನ್ನನ್ನು ಮರೆಯಲಾರೆ ಸುಶೀಲೆ, ಹೋಗಿ ಬರುತ್ತೇನೆ.

[ ರಮೇಶ ಕಣ್ಣು ತೆರೆದು, ಮೆಲ್ಲನೆ ಎದ್ದು ಕುಳಿತುಕೊಳ್ಳುವನು. ]

ಸುಶೀಲೆ:—ಇನ್ನೊಂದು ಉಪಕಾರ ಮಾಡಿ. ಈ ಚಿತ್ರವನ್ನು ನನ್ನ ನೆನಪಿಗಾಗಿ ಇಟ್ಟುಕೊಳ್ಳಿ. ಕೃತಘ್ನೆಯ ಚಿತ್ರವೆಂದು ಕಡೆಗಾಣಬೇಡಿ.

ಗೋವಿಂದ:—ಆಗಲಿ ಸುಶೀಲೆ. ನಿನ್ನ ನನ್ನ ಋಣಾನುಬಂಧ ಇಲ್ಲಿಗೆ ಹರಿಯಿತು. ಚಿತ್ರ ಇಟ್ಟುಕೊಂಡಿರುತ್ತೇನೆ. ( ಎಂದು ತೆರಳುವನು. )

ರಮೇಶ:—ಸುಶೀಲೆ, ಸುಶೀಲೆ.

ಸುಶೀಲೆ:—ಏನು? ತುಂಬಾ ಪೆಟ್ಟಾಯಿತೆ?

ರಮೇಶ:—(ಎದ್ದು ನಿಂತು) ಇಲ್ಲ. (ಕೆನ್ನೆ ಮುಟ್ಟಿ ನೋಡಿ) ಬಲವಾಗಿಯೇ ಪೆಟ್ಟು ಹಾಕಿದರು; ಆದರೆ ಪೆಟ್ಟಾಗಿಲ್ಲ. ಕಣ್ಣುಗತ್ತಲೆ ಬಂತು. ತಲೆತಿರುಗಿ ಬಿದ್ದೆ, ಅಷ್ಟೆ. ಹೋಗಲಿ. ಆದದ್ದು ಆಗಿ ಹೋಯಿತು. ಗೋವಿಂದರಾಯರು ಹೊರಟುಹೋದರಲ್ಲವೆ?

ಸುಶೀಲೆ:—ಹೌದು. ಹೊರಟುಹೋದರು.

ರಮೇಶ:—ನಿನ್ನನ್ನು ಬಿಟ್ಟು ಹೊರಟುಹೋದರೆ?

ಸುಶೀಲೆ:—ಹೌದು. ಅದೇ ನನಗೂ ಆಶ್ಚರ್ಯ.

ರಮೇಶ:—ಸುಶೀಲೆ, ಗೋವಿಂದರಾಯರಂಥ ಜನ ವಿರಳ. ನಿನ್ನೊಡನೆ ಕೆಲವು ಕಾಲ ಬಾಳಿ ಒದುಕಿ ಕೈಬಿಡುವುದೆಂದರೆ, ಎಷ್ಟು ಔದಾರ್ಯ ಬೇಕು, ಎಂಥ ಕೆಚ್ಚು ಬೇಕು! ನಿನ್ನ ಚಿತ್ರವನ್ನು ಅವರಿಗೆ ಗುರುತಾಗಿ ಕಳಿಸಿಕೊಟ್ಟರೆ ತೆಗೆದುಕೊಳ್ಳುವರೆ?

ಸುಶೀಲೆ:—ನಾನೇ ಅವರಿಗೆ ಕೊಟ್ಟೆ. ತೆಗೆದುಕೊಂಡರು.

ರಮೇಶ:—ಒಳ್ಳೆಯದಾಯಿತು. ಶಿವಶಂಕರ್.

ಶಿವಶಂಕರ:—(ಹತ್ತಿರಕ್ಕೆ ಬಂದು) ಏನು ಸಾರ್?

ರಮೇಶ:—ಆ ಚಿತ್ರಗಳನ್ನು ನೋಡಬೇಕೆಂದು ನೀನು ಬಹುವಾಗಿ ಹಂಬಲಿಸಿದ್ದೀಯೆ. ಅವನ್ನು ನೋಡಿದೆಯಾ?

ಶಿವ:—ನೋಡಿದೆ ಸಾರ್. ನನ್ನ ಆಸೆ ತೀರಿತು.

ರಮೇಶ:—ಸರಿ. ನಾಳೆಯ ದಿನ ಆ ಮೂರು ಚಿತ್ರಗಳನ್ನೂ ಕಳಗಿಳಿಸಿ, ಜೋಪಾನವಾಗಿ ತೆಗೆದುಕೊಂಡು ಹೋಗಿ ಗೋವಿಂದರಾಯರಿಗೆ ಕೊಟ್ಟು ಬಾ. ಕೊಡುವಾಗ ಹೀಗೆ ಹೇಳು: ಒಂದು ಸುಶೀಲೆಯ ನೆನಪಿಗಾಗಿ ಕೊಟ್ಟ ಚಿತ್ರ; ಮತ್ತೊಂದು ನನ್ನ ನೆನಪಿಗಾಗಿ; ಮೂರನೆಯದು ಸುಶೀಲೆಯ ಬದಲು (ಎಂದು ಸುಶೀಲೆಯ ಕಡೆ ತಿರುಗಿ ಮುಗುಳುನಗುವನು.)

ಸುಶೀಲೆ:—ಏನು! ಚಿತ್ರಗಳನ್ನು ಗೋವಿಂದರಾಯರಿಗೆ ಕೊಡುವುದೇ? ಅವರು ಆ ಚಿತ್ರಗಳನ್ನಾಗಲೇ ತೆಗೆದುಕೊಂಡು ಹೋಗಿದ್ದಾರೆ. ಅಲ್ಲದೆ — ನಿಮ್ಮ ನಲ್ಲೆಯ ಚಿತ್ರ ಅವರಿಗೆ ಕೊಡುತ್ತೀರಾ — (ಎಂದು ತಾನೂ ಮುಗುಳುನಗುವಳು.)

ರಮೇಶ:—ಹುಚ್ಚಿ! ನೀನು ಬೆಲೆವೆಣ್ಣಲ್ಲವೇ? ನೀನು ಬಹು ಬೆಲೆ ಬಾಳುವ ಹೆಣ್ಣು. ನಿನಗೆ ಪ್ರತಿಯಾಗಿ, ಅವರ ಔದಾರ್ಯಕ್ಕೆ ಪ್ರತಿಯಾಗಿ, ಅವರಿಗೆ ಈ ಮೂರು ಚಿತ್ರಗಳನ್ನು ಕೊಡುವುದು ಹೆಚ್ಚೆ? ಅಲ್ಲದೆ, ಆ ಚಿತ್ರಗಳ ಮೂರ್ತಿ ನೀನೇ ಇಲ್ಲಿ ಇರುವಾಗ ಅವು ಏಕೆ? ಚಿತ್ರಗಳ ನಲ್ಲೆ ಬಳಿಯಿರುವಂದು, ನಲ್ಲೆಯ ಚಿತ್ರಗಳು ಅವರ ಬಳಿ ಇದ್ದರೆ ಬಾಧಕವೇನು? ನಿನ್ನ ಚಿತ್ರಗಳನ್ನಾದರೂ ಇಟ್ಟುಕೊಂಡಿರುವ ತೃಪ್ತಿಯಾದರೂ ಅವರಿಗೆ ಬೇಡವೆ ನಿನ್ನನ್ನು ನನಗೆ ಒಪ್ಪಿಸಿದ್ದಕ್ಕೆ ಪ್ರತಿಫಲವಾಗಿ?— ಶಿವಶಂಕರ್, ಕೊಟಡಿಗೆ ಹೋಗಿ— ಆ —ಇದನ್ನು ಅದನ್ನು— ಅದು .... ( ಶಿವಶಂಕರ ತಿಳಿಯದೆ ನಿಂತಿರುವನು ) ....ಇದು....ಅದು.... ಸ್ವಲ್ಪ ತೆಗೆದುಕೊಂಡು ಬಾ. ( ಎಂದು ನಸುನಗುವನು. ಶಿವಶಂಕರ ಸಂದರ್ಭ ಅರಿತು ಒಳಕ್ಕೆ ಹೋಗುವನು. ) ಸುಶೀಲೆ, ಬಾ ಇಲ್ಲಿ ( ಎಂದು ಅವಳ ಕೈಹಿಡಿದು ) ಆ ಚಿತ್ರಗಳನ್ನು ನೋಡಿರುವಿಯಲ್ಲವೆ? ಅವುಗಳಿಗೆ ನೀನೇ ಬೆಲೆ; ನಿನಗೆ ಅವು ಬೆಲೆ. ಆದರೆ ನಿನ್ನ ಒಲವಿಗೆ ಮಾತ್ರ ಬೆಲೆಕಟ್ಟಲಾರೆ.

ಸುಶೀಲೆ:—ನನ್ನ ಒಲವಿಗೆ ನಿನ್ನ ಒಲವೇ ಬೆಲೆ. ಅಲ್ಲವೇ ರಮೇಶ್? ಅದಿರಲಿ. ನನ್ನ ಎಲ್ಲ ಚಿತ್ರಗಳನ್ನೂ ಗೋವಿಂದರಾಯರಿಗೇ ಕೊಟ್ಟುಬಿಟ್ಟೆಯಲ್ಲ, ನನ್ನದು ಇನ್ನೊಂದು ಬರೆಯುವೆಯೋ ಇಲ್ಲವೋ?

ರಮೇಶ:—ಮೊದಲೇ ಹೇಳಲಿಲ್ಲವೆ: ನೀನು ಇಲ್ಲದ್ದರಿಂದ ನಿನ್ನ ಚಿತ್ರಗಳು; ನೀನೇ ಇರುವಾಗ ನಿನ್ನ ಚಿತ್ರಗಳೇಕೆ? ಒಂದು ವೇಳೆ ಬರೆದರೂ, ಮೊದಲು ಬೇರೆ ಒಂದು ಚಿತ್ರ ಬರೆಯಬೇಕಾಗಿದೆ. ಅದನ್ನು ಬರೆದು ಆ ಮೇಲೆ ನಿನ್ನದು.

ಸುಶೀಲೆ:—ಯಾರಿಗಾಗಿ?

ರಮೇಶ:—ನನಗಾಗಿ – ನಿನಗಾಗಿ.

ಸುಶೀಲೆ:—ಯಾರ ಚಿತ್ರ?

ರಮೇಶ:—ಗೋವಿಂದರಾಯರದ್ದು.

ಸುಶೀಲೆ:—ಗೋವಿಂದರಾಯರದ್ದೆ!

ರಮೇಶ:—ಆಶ್ಚರ್ಯವೇಕೆ? ನನ್ನ ಚಿತ್ರಕಲೆಯ ಹುಚ್ಚಿನಿಂದ ನಿನ್ನ ಸಂಗ ನನಗಾಯಿತು. ಗೋವಿಂದರಾಯರ ಚಿತ್ರಕಲೆಯ ಹುಚ್ಚಿನಿಂದ ನೀನು ಇಲ್ಲಿಗೆ ಬರುವಂತಾಯಿತು; ನನ್ನೊಡನೆ ಇಂದು ಸೇರುವಂತಾಯಿತು. (ಎಂದು ಅವಳ ಭುಜದ ಮೇಲೆ ಕೈಯಿಟ್ಟು ಅವಳನ್ನು ತಬ್ಬಿಕೊಳ್ಳುವನು.) ಅವರ ಚಿತ್ರ ಅಗತ್ಯವಾಗಿ ಇಲ್ಲಿ ಇರಬೇಕು.... ಶಿವಶಂಕರ್

ಶಿವಶಂಕರ:—(ಒಳಗಿನಿಂದ ಬಂದು) ಏನು ಸಾರ್.

ರಮೇಶ:—ಸುಶೀಲೆ ಮನೆಯ ಗುರುತು ಹೇಳುತ್ತಾಳೆ. ನಾಳೆ ಗೋವಿಂದರಾಯರ ಮನೆಗೆ ಹೋಗಿ, ಹೇಗಾದರೂ ಮಾಡಿ ಅವರನ್ನು ಒಪ್ಪಿಸಿ ಅವರನ್ನು ಇಲ್ಲಿಗೆ ಕರೆದುಕೊಂಡು ಬರುವುದು ನಿನ್ನ ಭಾರ.

ಶಿವಶಂಕರ:—ಆಗಲಿ ಸಾರ್ (ಎಂದು ಮತ್ತೆ ಒಳಕ್ಕೆ ಹೋಗುವುದಕಲ್ಲಿರುವನು.)

ರಮೇಶ:—ಇನ್ನೊಂದು ವಿಚಾರ, ಸ್ವಲ್ಪ ನಿಂತುಕೋ. ಈಗ ಮನೆಗೆ ಹೋಗು. ಇನ್ನೊಂದು ವಾರ ರಜಾ ನಿನಗೆ ಇನ್ನು.

ಶಿವಶಂಕರ:—ಆಗಲಿ ಸಾರ್. ಒಂದು ವಿಷಯ ಸಾರ್ .... (ಎಂದು ತತವರಿಸುವನು.)

ರಮೇಶ:—ಸಂಕೋಚ ಯಾಕೆ, ಹೇಳು.

ಶಿವಶಂಕರ:—ಏನೂ ಇಲ. ಬೇರೆ ಒಂದು ಮನೆ ನೋಡಲೆ ಅಂತ.

ರಮೇಶ:—ಯಾರಿಗೆ?

ಶಿವಶಂಕರ:—ನಿಮಗೆ ಸಾರ್.

ರಮೇಶ:—ಒಳ್ಳೆಯದು. ನನಗೆ ತೋರಲೇ ಇಲ್ಲ. ಸುಶೀಲೆ ಚಿತ್ರಪಟವಾಗಿಯೇ ಇದ್ದರೆ ಈ ಮನೆಯೇ ಸಾಕಾಗುತ್ತಿತ್ತು. ಈಗ ಅವಳು ಜೀವ ತಳೆದು ಬಂದಿದ್ದಾಳೆ. ಅಲ್ಲವೆ ಸುಸೀ?

ಸುಶೀಲೆ:—ನಿಮ್ಮ ಚಿತ್ರಕಲೆಯ ಮಹಿಮೆ (ಎಂದು ನಗುವಳು. ರಮೇಶನೂ ನಗುವನು)

— ತೆರೆ ಬೀಳುವುದು. —

---

## ಆಡುವವರಿಗೆ ಸೂಚನೆ.

ನಾಟಕ ಆಡಲು ಇಷ್ಟಪಡುವವರು ಆಡುವ ಮುನ್ನ ಲೇಖಕರ ಅನುಮತಿ ಪಡೆಯಬೇಕು.

ನಾಟಕದಲ್ಲಿ ಪ್ರಸಕ್ತವಾಗಿರುವ ಮೂರು ‘ತೆರೆಮರೆಯ ಚಿತ್ರ’ಗಳನ್ನು ರಂಗಸ್ಥಳದಲ್ಲಿ ಪ್ರದರ್ಶಿಸಬೇಕಾದ್ದು ಅತ್ಯಾವಶ್ಯಕ. ಆ ಚಿತ್ರಗಳಲ್ಲಿನ ಮುಖಗಳ ಮಾಟ ಸ್ಥೂಲವಾಗಿಯಾದರೂ ಸುಶೀಲೆಯ ಪಾತ್ರವಹಿಸುವವರ ಮುಖಭಾವವನ್ನು ಹೋಲುವಂತೆ ಚಿತ್ರ ಬರಸಬೇಕು. ಸುಶೀಲೆಯ ಪಾತ್ರದ ಫೋಟೋ ತೆಗೆಯಿಸಿ, ಅದನ್ನು ಚಿತ್ರಗಾರನಿಗೆ ಕೊಟ್ಟರೆ, ಅದರ ಆಧಾರದ ಮೇಲೆ ಆ ಚಿತ್ರಗಳನ್ನು ಆತ ಬರೆದುಕೊಡಬಲ್ಲನು. ನಾಟಕದಲ್ಲಿ ಸೂಚಿಸುವ ಚಿತ್ರಗಳ ಸಂಬಂಧವಾದ ಇತರ ವಿವರಗಳನ್ನೂ ಆತನಿಗೆ ಒದಗಿಸಬೇಕು. ಈ ಬಗ್ಗೆ ಸ್ವಲ್ಪ ವೆಚ್ಚ ಮಾಡಬೇಕಾಗುತ್ತದೆ. ಕೆಲವಾದರೂ ಪ್ರಕೃತಿದೃಶ್ಯ ಚಿತ್ರ ಪಟಗಳನ್ನು ಹೇಗಾದರೂ ಕಲೆಹಾಕಿ ಪ್ರದರ್ಶಿಸಿದರೆ ನಾಟಕಕ್ಕೆ ಹೆಚ್ಚಿನ ಕಳೆ ಕಟ್ಟುತ್ತದೆ ]

# ಹಿನ್ನುಡಿ

ಸುಶೀಲೆ 'ಸೂಳೆಯ ಮಗಳು'; ವಿದ್ಯಾವತಿ; ಸುಸಂಸ್ಕೃತಳು. ಆದ್ದರಿಂದಲೇ, ಸೂಳೆಯ ಮಗಳಾದರೂ ಸೂಳೆಗಾರಿಕೆಯಲ್ಲಿ ತೊಡಗಿದವಳಲ್ಲ ಇಂಥವಳು ಸಹಪಾಠಿಯಾದ ರಮೇಶನನ್ನು ಒಲಿಯುತ್ತಾಳೆ. ಅವನ ಗೆಳೆತನದಲ್ಲಿ ಅಪಾರ ಆನಂದವನ್ನು ಪಡೆಯುತ್ತಾಳೆ. ಅವರಿಬ್ಬರ ಪರಸ್ಪರ ಪ್ರೇಮ ಬಹು ಗಾಢವಾಗಿರುತ್ತದೆ. ಪ್ರೇಮಿಗಳು ಮೊದಲು ಕುಲಗೋತ್ರಗಳನ್ನು ವಿಚಾರಿಸುವ ಗೋಜಿಗೆ ಹೋಗುವುದಿಲ್ಲ; ಆದರೆ ಪ್ರೇಮಗೊಂಡ ಮೇಲೆ ಕುಲಗೋತ್ರಗಳ ಭೂತ ಎದ್ದು ಎದುರುನಿಂತು ತಾಂಡವವಾಡುತ್ತದೆ; ಎಷ್ಟೋ ವೇಳೆ ಪ್ರೇಮಿಗಳು ಅದಕ್ಕೆ ಹೆದರಿ ಆಮರಣಾಂತ ದುಃಖವನ್ನು ಅನುಭವಿಸುತ್ತಾರೆ. ಸುಶೀಲೆ ರಮೇಶನನ್ನು ಒಲಿಯುವುದು ಒಲಿದುಬಿಟ್ಟಳು; ಆಮೇಲೆ ಕುಲದ ವಿಚಾರ ಅವಳನ್ನು ಕಾಡಿತು: 'ಸತ್ಕುಲಪ್ರಸೂತ'ನಾದ ರಮೇಶನನ್ನು ಮದುವೆಯಾಗಿ ಅವನನ್ನು ಸಮಾಜದ ದೃಷ್ಟಿಯಲ್ಲಿ ಕೀಳಾಗಿ ಮಾಡಲು ಹಿಂದೆಗೆಯುತ್ತಾಳೆ. ಅವಳಲ್ಲಿ ಈ ಭಾವ ಹುಟ್ಟುವುದು ಸಹಜ. ಹಾಗೆಯೇ ಇರಲು, ಅಕಸ್ಮಾತ್ತಾಗಿ, ತನ್ನ ತಾಯಿ ಸಲುವಾಗಿ ತನ್ನ ಪ್ರೇಮವನ್ನು ಸಹ ತ್ಯಾಗಮಾಡಿ ಗೋವಿಂದರಾಯರ ಸ್ವತ್ತಾಗುತ್ತಾಳೆ. ಗೋವಿಂದರಾಯನೇನೊ ಅವಳನ್ನು ಹೆಂಡತಿಯೆಂದೇ ಭಾವಿಸಿ ಅವಳನ್ನು ಹಾಗೆಂದೇ ಮೆರಸುತ್ತಿರುತ್ತಾನೆ. ಆದರೂ ಅವಳು ಅವನ 'ಧರ್ಮಪತ್ನಿ'ಯೇನೂ ಅಲ್ಲ. ಗೋವಿಂದರಾಯ ವಯಸ್ಕನಾದರೂ ಸಿರಿವಂತ, ಉದಾರಿ, ವಿನೋದಿ, ಸರಸಿ, ರಸಿಕ; ಇವನ ಸಹವಾಸದಲ್ಲಿ ಸುಶೀಲೆ ಒಂದು ರೀತಿಯಲ್ಲಿ ಸುಖವಾಗಿರುತ್ತಾಳೆ. ಆದರೆ, ರಮೇಶ ಚಿತ್ರಕಲಾ ವ್ಯಾಸಂಗಕ್ಕೆ ಕಲ್ಕತ್ತೆಗೆ ಹೋಗಿದ್ದವನು ಹಿಂದಿರುಗಿ ಬಂದನೆಂಬುದನ್ನು ತಿಳಿದ ಮೇಲೆ, ಅವನನ್ನು ಕಾಣಬೇಕೆಂಬ ಉತ್ಕಟ ಪ್ರೇರಣೆಯಾಗುತ್ತದೆ ಅವಳಿಗೆ. ಇದೂ ಸಹಜವೆ. ಚಿತ್ರ ಬರಸುವ ನೆಪದಿಂದ ಹೋಗಿ ಒಂದು ಮಾಡುತ್ತಿರುತ್ತಾಳೆ. ಚಿತ್ರ ಬರೆಯುವ ಕಾಲದಲ್ಲೆಲ್ಲ ಅವರಿಬ್ಬರಿಗೂ ಪರಸ್ಪರ ಮಾತನಾಡುವು

ದಕ್ಕೂ ಅವಕಾಶವಿರಲಿಲ್ಲ. ಒಮ್ಮೆ ಮಾತನಾಡಲು ಅವರಿಬ್ಬರ ಹೃದಯಗಳೂ ತುಡಿಯುತ್ತಿರುತ್ತವೆ. ಕಡೆಯ ದಿನ ಆ ಅವಕಾಶ ಒದಗಿಬರುತ್ತದೆ. ರಮೇಶ ತನ್ನನ್ನು ಇನ್ನೂ ಹೇಗೆ ಮೊದಲಿನಂತೆಯೆ ಪ್ರೀತಿಸುತ್ತಿರುವನೆಂಬುದು ಅವಳ ಅರಿವಿಗೆ ಬರುತ್ತದೆ. ಸುಶೀಲೆಯ ಪ್ರೇಮವಾದರೂ ಎಷ್ಟು ಅಚಲವಾಗಿದ್ದು, ಶುದ್ಧವಾಗಿದೆಯೆಂಬುದನ್ನು ರಮೇಶ ಮನಗಾಣುತ್ತಾನೆ. ಸುಶೀಲೆ ಗೋವಿಂದರಾಯನನ್ನು ಬಿಟ್ಟುಬಿಡಲು ಮನಸ್ಸು ಮಾಡುತ್ತಾಳೆ. ಅವಳು ಗೋವಿಂದರಾಯನ ಹೆಂಡತಿಯೆ ಎಂದು ಭಾವಿಸಿದ್ದ ರಮೇಶನು ಅವಳನ್ನು ಸ್ವೀಕರಿಸಲು ಸಿದ್ಧನಾಗಿರುವುದಿಲ್ಲ; ಅವಳು ಸೂಳೆಯ ಮಗಳೆಂದು ತಿಳಿದ ಕೂಡಲೆ ಅವನಿಗೆ ಮೊದಲು ಆಶ್ಚರ್ಯವಾಗುತ್ತದೆ. ಸುಶೀಲೆ ತನ್ನ ಪೂರ್ವ ವೃತ್ತಾಂತವನ್ನೆಲ್ಲ ರಮೇಶನಿಗೆ ತಿಳಿಸುತ್ತಾಳೆ. ಸುಶೀಲೆಯ ಇತಿವೃತ್ತ ತಿಳಿದ ಮೇಲೆ, ರಮೇಶ ಧೈರ್ಯಮಾಡಿ, ಔದಾರ್ಯದಿಂದ ಅವಳನ್ನು ಸ್ವೀಕರಿಸಲು ನಿಶ್ಚಯಿಸುತ್ತಾನೆ. ಇವರಿಬ್ಬರ ಪರಸ್ಪರ ಗಾಢಪ್ರೇಮದ ನಿಜಸ್ಥಿತಿಯನ್ನರಿತ ಮೇಲೆ ಗೋವಿಂದರಾಯ ಸುಶೀಲೆಯನ್ನು ಬಿಟ್ಟುಕೊಟ್ಟು ಔದಾರ್ಯ ತೋರುತ್ತಾನೆ. ಸುಶೀಲೆ ಗೋವಿಂದರಾಯನ ಧರ್ಮಪತ್ನಿಯಾಗಿದ್ದ ಪಕ್ಷದಲ್ಲಿ ಅವಳು ಅವನನ್ನು ಬಿಡುವ ಯೋಚನೆಯನ್ನೂ ಮಾಡುತ್ತಿರಲಿಲ್ಲ, ಅವನು ಅವಳನ್ನು ಬಿಟ್ಟುಕೊಡುತ್ತಲೂ ಇರಲಿಲ್ಲ; ರಮೇಶ ಅವಳನ್ನು ಬಯಸುತ್ತಲೂ ಇರಲಿಲ್ಲ. ಗೋವಿಂದರಾಯ ಸುಶೀಲೆಯನ್ನು ಒಂದು ಭೋಗವಸ್ತುವಾಗಿ ಬೆಲೆಕೊಟ್ಟು ಪಡೆದಿದ್ದ; ಅವಳ ಪ್ರೇಮವೆಲ್ಲ ಬೇರೆಯ ಕಡೆ ಇದೆಯೆಂದು ತಿಳಿದ ಮೇಲೆ, ಅವಳಿಂದ ಇನ್ನು ತನಗೆ ಸುಖವಿಲ್ಲವೆಂದು ತಿಳಿದ ಮೇಲೆ, ಅವಳು ತನ್ನೊಡನೆ ಇರುವ ಬದಲು ಪ್ರಾಣವನ್ನಾದರೂ ಕಳೆದುಕೊಳ್ಳಲು ಸಿದ್ಧಳಾಗಿರುವಳೆಂದು ಗೊತ್ತಾದ ಮೇಲೆ ಅವಳನ್ನು ಬಿಟ್ಟುಕೊಡುವುದು ಅವನಿಗೆ ಅಷ್ಟು ವ್ಯಸನಕರವಲ್ಲ.

ಕಡೆಯಲ್ಲಿ ರಮೇಶ ಸುಶೀಲೆಯನ್ನು ಮದುವೆಯಾಗುತ್ತಾನೆಯೆ ಇಲ್ಲವೆ ಎಂಬ ಬಗ್ಗೆ ನಿರ್ದಿಷ್ಟವಾದ ಸೂಚನೆಯಿಲ್ಲ. ರಮೇಶ–ಸುಶೀಲೆಯರು ಮದುವೆಯಾಗಲು ಎಂದೋ ಸಿದ್ಧರಾಗಿದ್ದರು ಎಂದಮೇಲೆ

ಅವರು ಮುಂದೆ ಮದುವೆಯಾಗುವುದಿಲ್ಲ ಎಂಬ ಶಂಕೆಗೆ ಕಾರಣವಿಲ್ಲ. ರಮೇಶ – ಸುಶೀಲೆಯರಂಥ ವ್ಯಕ್ತಿಗಳು ಮದುವೆಯಾದರೆ ನಮ್ಮ ಸಮಾಜ ಒಪ್ಪಲು ಸಿದ್ಧವಾಗಿದೆಯೆ—ಎಂಬುದು ಒಂದು ಸಮಸ್ಯೆ.

ಸಾಮಾಜಿಕ ನಾಟಕ ನಿರ್ಭೀತಿಯಿಂದ ಸಾಮಾಜಿಕ ಸಮಸ್ಯೆಗಳನ್ನು ಎದುರಿಸಲು ಪ್ರಯತ್ನಿಸಬೇಕು, ಸಮಾಜದ ಓರೆಕೋರೆಗಳನ್ನು ಎದ್ದುಕಾಣುವಂತೆ ಚಿತ್ರಿಸಿ ತೋರಬೇಕು. ಅದು ಸಮಸ್ಯೆಯನ್ನು ಸೂಚಿಸಿ ಅಲ್ಲಿಗೇ ಬಿಡಬಹುದು, ಅದಕ್ಕೊಂದು ಪರಿಹಾರಮಾರ್ಗವನ್ನು ತೋರಿದರೂ ತೋರಬಹುದು; ಓರೆಕೋರೆಗಳನ್ನು ಮನಗಾಣಿಸಿ ಮುಂದೆ ಹೋಗಬಹುದು, ಅವನ್ನು ತಿದ್ದಲೂ ಪ್ರಯತ್ನಿಸಬಹುದು. ಕಾಲಕಾಲಗಳಲ್ಲಿ 'ಸಮಾಜ ಚಿತ್ರ'ದ ಒಂದಲ್ಲ ಒಂದು ಭಾಗದ ಮೇಲೆ ಯಾವಾಗಲೂ ಒಂದು ತೆರೆ ಕವಿದಿರುತ್ತದೆ; ನಿಜವಾದ ಸಾಮಾಜಿಕ ನಾಟಕ ಅದನ್ನು ತೆಗೆದು ಚಿತ್ರದ ಮೇಲೆ ಬೆಳಕು ಬೀಳಿಸಬೇಕು.

ಕನ್ನಡದಲ್ಲಿ ಸಾಮಾಜಿಕ ನಾಟಕಗಳು ಈಚೀಚೆಗೆ ಹುಟ್ಟಿದವು; ಅವುಗಳಲ್ಲಿ ಹಲಕೆಲವು ಮೇಲಿನ ಕಾರ್ಯವನ್ನು ತಕ್ಕಮಟ್ಟಿಗೆ ನಿರ್ವಹಿಸಿವೆ; ಕೈಲಾಸಂ ಮುಂತಾದ ಕೆಲವರ ನಾಟಕಗಳು ಉತ್ಕೃಷ್ಟ ರೀತಿಯಲ್ಲಿ ಮಾಡಿವೆ. ಸಂಸ್ಕೃತ ಸಾಹಿತ್ಯವನ್ನು ತೆಗೆದುಕೊಂಡರೆ, "ಮೃಚ್ಛಕಟಿಕ" ನಾಟಕ ಸಾಮಾಜಿಕ ನಾಟಕಕರ್ತರಿಗೆ ಒಂದು ಉತ್ತಮವಾದ ಮಾದರಿ.

'ಮೃಚ್ಛಕಟಿಕ'ದಲ್ಲಿ, ಬ್ರಾಹ್ಮಣ ಕುಲದ, ಆಗಲೇ ಮದುವೆಯಾಗಿದ್ದ, ಚಾರುದತ್ತನು ತನ್ನ ಪ್ರೇಮಕ್ಕೆ ಪಾತ್ರಳಾದ ವೇಶ್ಯೆ ವಸಂತಸೇನೆಯನ್ನು ತನ್ನ ಮನೆಗೆ ಕರೆದುಕೊಂಡು ಬಂದು ಕುಟುಂಬದಲ್ಲಿ ಅವಳಿಗೊಂದು ಮರ್ಯಾದೆಯ ಸ್ಥಾನ ಕೊಟ್ಟ ಸಂಗತಿ ಪ್ರಸಿದ್ಧವಾಗಿದೆ. ಆರ್ಯಕ ಮಹಾರಾಜ ಕೂಡ ವಸಂತಸೇನೆಯನ್ನು 'ವಧೂ' ಎಂಬುದಾಗಿ ಅಂಗೀಕರಿಸುತ್ತಾನೆ. ಅಂದಿನ ಸಮಾಜದಲ್ಲಿ ಆ ರೀತಿ ನಡೆಯುತ್ತಿತ್ತು, ಅಂತಹ ನಡವಳಿಕೆಯನ್ನು ಸಮಾಜ ಒಪ್ಪುತ್ತಿತ್ತು. ಅಂದಿನಂತೆ ಇಂದೂ ನಮ್ಮ ಸಮಾಜದಲ್ಲಿ ವೇಶ್ಯೆಯರು ಇದ್ದಾರೆ. ಹಿಂದಿನ ಕಾಲದಲ್ಲಿ ವೇಶ್ಯೆಯರು ಕಾಮುಕರ ಕಾಮತೃಪ್ತಿ ಮಾಡು

ತ್ತಿದ್ದುದಲ್ಲದೆ, ಭರತನಾಟ್ಯ, ಸಂಗೀತ, ಕುಶಲಕಲೆಗಳು—ಮೊದಲಾದ ಸಂಸ್ಕೃತಿಪೋಷಕ ವಿದ್ಯೆಗಳಿಗೆ ಆಗರವಾಗಿದ್ದರು; ವೇಶ್ಯೆಯರದೇ ಒಂದು ಕುಲವಾಗಿತ್ತು, ವರ್ಗವಾಗಿತ್ತು; ಸಮಾಜದಲ್ಲಿ ವೇಶ್ಯೆಯರಿಗೆ ಒಂದು ನಿಯತವಾದ ಸ್ಥಾನವಿತ್ತು; ಅವರಿಂದ ಸಮಾಜಕ್ಕೆ ಒಂದು ಬಗೆಯಾದ ಉಪಕಾರವೂ ಆಗುತ್ತಿತ್ತು. ಇಂದು ಅಂತಹ ವೇಶ್ಯೆಯರಿಲ್ಲ; ಆ ವೇಶ್ಯಾವರ್ಗ ಮಾಯವಾಗಿದೆ; ಇಂದಿನ ವೇಶ್ಯೆಯರು ಸಮಾಜಕ್ಕೆ ವಿಷಪ್ರಾಯರಾಗಿದ್ದಾರೆ ಆ ವಿಷವೂ ಮಿತವಾಗಿದ್ದರೆ ಔಷಧವೆಂದು ಪರಿಗಣಿಸುವವರೂ ಇದ್ದಾರೆ. ಆದರೆ ಪರಿಸ್ಥಿತಿ ಹಾಗಿಲ್ಲ; ಆ ವಿಷ ಒಳಗೊಳಗೇ ಬಗೆಬಗೆಯಲ್ಲಿ ಹಬ್ಬುತ್ತಿದೆ. ಇದಕ್ಕೆ ಕಾರಣಗಳೂ ಹಲವಾರು. ವೇಶ್ಯೆಯರು ವಿಷವೆಂಬುದನ್ನು ಸರಕಾರವೂ ಮನಗಂಡು, ಅವರ ವೃತ್ತಿಯನ್ನು ತಡೆಯಲು ತಕ್ಕ ಕಾನೂನುಗಳನ್ನೂ ಶಿಕ್ಷೆಗಳನ್ನೂ ವಿಧಿಸತೊಡಗಿದೆ. ವೇಶ್ಯೆಯರನ್ನು ಉದ್ಧಾರ ಮಾಡಲು ರಕ್ಷಣಾಲಯಗಳೂ ಏರ್ಪಾಡಾಗುತ್ತಿವೆ. ಇವೂ ಬೇಕು; ಆದರೆ ಇಷ್ಟೇ ಸಾಲದು. ಸಮಾಜಹಿತೈಷಿಗಳಾದ ಪುರುಷರು ಕೆಚ್ಚಿನಿಂದ ಮುಂದೆ ಬಂದು ವೇಶ್ಯೆಯರನ್ನು "ವಧು" ಗಳನ್ನಾಗಿ ಮಾಡುವ ವರೆಗೂ ಯಾವ ಕಾನೂನೂ ಅವರನ್ನು ಕಾಯಲಾರದು, ಯಾವ ಶಿಕ್ಷೆಯೂ ಅವರನ್ನು ಅವರ 'ಹೀನವೃತ್ತಿಯಿಂದ ತಪ್ಪಿಸಲಾರದು, ಯಾವ ರಕ್ಷಣಾಲಯದಲ್ಲೂ ಅವರಿಗೆ ನಿಜವಾಗಿ ಬೇಕಾಗಿರುವಂತಹ ಸುಖಾಶ್ರಯ ಅವರಿಗೆ ದೊರೆಯಲಾರದು. ನಮ್ಮಲ್ಲಿ ಚಾರುದತ್ತರುಗಳು ಹುಟ್ಟುವವರೆಗೂ ವೇಶ್ಯೆಯರು ವೇಶ್ಯೆಯರಾಗಿಯೇ ಇರುವರು; ವೇಶ್ಯೆಯರಾಗಿದ್ದುಕೊಂಡು, ಸಮಾಜಕ್ಕೆ ವಿಷಪ್ರಾಯರಾಗಿರುವರು. ಅಲ್ಲದೆ, ನಮ್ಮ ಸಮಾಜದಲ್ಲಿನ ವೇಶ್ಯೆಯರುಗಳಲ್ಲಿ ಎಷ್ಟು ಮಂದಿ ಕುಲೀನ ವಂಶದಲ್ಲಿ ಹುಟ್ಟಿ ಯಾವ ಯಾವ ಕಾರಣಗಳಿಗಾಗಿ ವೇಶ್ಯಾವೃತ್ತಿಯನ್ನು ಅವಲಂಬಿಸಿರುವರೋ ಬಲ್ಲವರಾರು ? ನಮ್ಮ ಸಮಾಜದ ಹಲವಾರು ವೇಶ್ಯೆಯರ ಪೂರ್ವಸ್ಥಿತಿಯ ಚಿತ್ರಗಳ ಮೇಲೆ ತೆರೆ ಮುಸುಕಿದೆ; "ತೆರೆಮರೆಯ ಚಿತ್ರಗಳ" ತೆರೆ ತೆಗೆದ ಮೇಲೆ ಅವುಗಳ ಸ್ವಸ್ವರೂಪ ತಿಳಿಯಲಾದೀತು, ಸತ್ಯ ಬಯಲಾದೀತು. ಪ್ರಕೃತ

ನಾಟಕದಲ್ಲಿ, ವೇಶ್ಯೆಯ ಮಗಳಾದ ಸುಶೀಲೆಯ ಜೀವನ–ಚಿತ್ರಗಳ ಮೇಲೆ ಕವಿದಿದ್ದ ತೆರೆಯನ್ನು ತೆಗೆದುಹಾಕಿ, ಅವಳ ಸ್ವಸ್ವರೂಪ ವ್ಯಕ್ತಗೊಳ್ಳುವಂತೆ ಮಾಡಿದೆ.

ಚಾರುದತ್ತ–ವಸಂತಸೇನೆಯರಿಗೂ ರಮೇಶ–ಸುಶೀಲೆಯರಿಗೂ ಹೋಲಿಕೆ ಮಾಡುವುದು ನನ್ನ ಉದ್ದೇಶವಾಗಿಲ್ಲ. ಆದರೆ, ಆ ನಾಟಕದಲ್ಲಿ ಎದ್ದುಕಾಣುವ ಸಮಸ್ಯೆ ಇಲ್ಲಿಯೂ ಬೇರೆಯ ರೀತಿಯಲ್ಲಿ ಮೂಡಿದೆ ಎಂಬುದನ್ನು ಸೂಚಿಸಲು ಕೆಲವು ಮಾತುಗಳನ್ನು ಹೇಳಿದ್ದೇನೆ. ಆ ನಾಟಕದಲ್ಲಿನ ಸನ್ನಿವೇಶ ಸಂದರ್ಭಗಳು ಬೇರೆ, ಇಲ್ಲಿನವು ಬೇರೆ. ಅಲ್ಲಿ ಸಮಸ್ಯೆ ಬಗೆಹರಿದಿದೆ. ಇಲ್ಲಿ ಸಮಸ್ಯೆ ಸಂಪೂರ್ಣವಾಗಿ ಬಗೆಹರಿದಿಲ್ಲ. ಸಮಸ್ಯೆಯ ಒಂದು ಮುಖವನ್ನು ಕಲಾ ರೀತಿಗೆ ಎಷ್ಟರ ಮಟ್ಟಿಗೆ ಹೊಂದಿಸಿಕೊಳ್ಳಬಹುದೊ ಅಷ್ಟರ ಮಟ್ಟಿಗೆ ಹೊಂದಿಸಿಕೊಂಡು, ಎಷ್ಟರ ಮಟ್ಟಿಗೆ ಮುಂದಿಡಬಹುದೋ ಅಷ್ಟರ ಮಟ್ಟಿಗೆ ಮುಂದಿಟ್ಟದ್ದಾಗಿದೆ. ನಾಟಕದಲ್ಲಿ ಹೇಳಲಾಗದ ನನ್ನ ಅಭಿಪ್ರಾಯಗಳನ್ನು ಇಲ್ಲಿ ಮಂಡಿಸಿದ್ದೇನೆ. ನಾಟಕದಲ್ಲಿ ಸಮಸ್ಯೆ ಬಗೆಹರಿದರೆ ತಾನೆ ಏನು ಬಂದ ಹಾಗಾಯಿತು! ಸಮಾಜದಲ್ಲಿ ಬಗೆಹರಿಯಬೇಕು; ಬಗೆಹರಿದೀತೆಂದು ನಂಬಿದ್ದೇನೆ. "ತೆರೆಮರೆಯ ಚಿತ್ರಗಳು" ಎಂದೆಂದೂ ತೆರೆಯ ಮರೆಯಲ್ಲೇ ಇರಲಾಗುವುದಿಲ್ಲ; ಒಂದಲ್ಲ ಒಂದು ದಿನ ಬೆಳಕು ಕಾಣಬೇಕು.

—ಎಂ. ವಿ. ಸೀ.